ಸುಧಾಕರ ಕರ್ಣಾಟಕ ಗ್ರಂಥಾವಳಿ

ಗ್ರಂಥ ೭

# ಸಾಧು ತುಕಾರಾಮ

(ನಾಟಕ)

ಬೆಳ್ಳಾವೆ ನರಹರಿಶಾಸ್ತ್ರಿ



ಪ್ರಕಾಶಕರು
ಬೆಳ್ಳಾವೆ ಪುಸ್ತಕಾಲಯ
ಬೆಂಗಳೂರು ನಗರ.
೧೯೩೪

## ಈ ಗ್ರಂಥಕರ್ತರಿಂದ ರಚಿತವಾದ ಗ್ರಂಥಗಳು

### ನಾಟಕಗಳು

ಶ್ರೀ ಕೃಷ್ಣಲೀಲಾ ನಾಟಕ
ಕಂಸ ವಧ
ಶ್ರೀ ಕೃಷ್ಣ ಗಾರುಡಿ
ಶ್ರೀ ಕೃಷ್ಣ ಪಾರಿಜಾತ
ಶ್ರೀ ರುಕ್ಮಿಣೀ ಸ್ವಯಂವರ
ಮಾರ್ಕಂಡೇಯ
ಮಹಾತ್ಮ ಕಬೀರದಾಸ
ಸಾಧು ತುಕಾರಾಮ
ಭೋಜ ಕಾಳಿದಾಸ
ಭೋಜ ಕುಮಾರ

### ಇತರ ಪುಸ್ತಕಗಳು

ರಾಜಭಕ್ತಿ ಕಾವ್ಯ (ಚಂಪು)
ವಿಜಯ ವಿಲಾಸ (ಮನೋಹರ ಕಾದಂಬರಿ)
ಪಾಪಿಯ ಪಾಡು (ಅದ್ಭುತ ಕಾದಂಬರಿ)
ಆಕಾಶಗಮನ ಸಾಹಸ (ಆಶ್ಚರ್ಯಕರ ವಿಷಯಗಳಿಂದ ಕೂಡಿದೆ)
ಶಾಲಾನಿತ್ಯಾನುಶಾಸನ (ಉಪಾಧ್ಯಾಯರಿಗೆ)
ಶಾಲಾ ಸಂವಿಧಾನ ( ,, )



ಪ್ರಕಾಶಕರು,
**ಬೆಳ್ಳಾವೆ ಪುಸ್ತಕಾಲಯ**
ಬಳೇಪೇಟೆ, ಬೆಂಗಳೂರು ನಗರ.

# ಪೀಠಿಕೆ

ಪಾಂಡುರಂಗ ಭಕ್ತಾಗ್ರಣಿಯಾದ ತುಕಾರಾಮ ಸಾಧು ಮಹನೀಯನ ಚರಿತ್ರೆವನ್ನು ರಂಗಭೂಮಿಯ ಮೇಲೆ ತರಬೇಕೆಂಬ ತಮ್ಮ ಉದ್ದೇಶವನ್ನು, ಕರ್ಣಾಟಕ ನಾಟಕ ಪ್ರೋತ್ಸಾಹಕರಾದ, ಗುಬ್ಬಿ ಶ್ರೀ ಚೆನ್ನಬಸವೇಶ್ವರ ನಾಟಕ ಸಂಘದ ಪ್ರೊಪ್ರೈಟರ್ ಶ್ರೀ ವಿನೋದರತ್ನಾಕರ ಜಿ. ಎಚ್. ವೀರಣ್ಣನವರು ನನಗೆ ೧೯೨೩ ನೆಯ ವರ್ಷದಲ್ಲಿ ಸೂಚಿಸಿದರು. ಮಹಾರಾಷ್ಟ್ರ ದೇಶದಲ್ಲಿ ಈ ಕಥೆಯನ್ನು ನಾಟಕ ರೂಪದಲ್ಲಿ ಆಡಿದುದನ್ನು ನೋಡಿದ್ದ ನಮ್ಮ ಮಿತ್ರರೊಬ್ಬರು, ಹಿಂದೀ ಭಾಷೆಯಲ್ಲಿ ಅದರ ಭಾವವನ್ನು ನನಗೆ ಹೇಳಿದರು. ನಾನು ಅದರಲ್ಲಿ ಕೆಲವು ಮುಖ್ಯಾಂಶಗಳನ್ನು ಗ್ರಹಿಸಿ, ನಮ್ಮ ರಂಗಭೂಮಿಗೆ ಅನುಕೂಲಿಸುವಂತೆ ಸಂವಿಧಾನವನ್ನೂ ನೂತನ ವಿಷಯಗಳನ್ನೂ ಕಲ್ಪಿಸಿ, ಈ ನಾಟಕವನ್ನು ಬರೆದುಕೊಟ್ಟೆನು. ಅದನ್ನು ಮ|| ರಾ|| ಶ್ರೀ ವೀರಣ್ಣನವರು ತಮ್ಮ ಪ್ರಧಾನ ಸಂಘದಲ್ಲಿ ಅಭ್ಯಾಸಮಾಡಿ, ಇದು ಧರ್ಮನೀತಿ ಭಕ್ತಿ ಬೋಧಕವಾದ ಉತ್ತಮ ನಾಟಕವೆಂಬದಾಗಿ ಜನರ ಆದರಣೆಗೆ ಪಾತ್ರವಾಗುವಂತೆ ಕಳೆಗೊಟ್ಟು ಅಭಿನಯಿಸಿ, ನನ್ನನ್ನು ಪ್ರೀತಿಯಿಂದ ಪ್ರೋತ್ಸಾಹಿಸಿದರು. ಈಚೆಗೆ ನಾನು ಆ ನಾಟಕವನ್ನು ಸ್ವಲ್ಪಮಟ್ಟಿಗೆ ವ್ಯತ್ಯಾಸಮಾಡಿ ಈ ರೀತಿ ಮುದ್ರಣ ಮಾಡಿಸಿರುವೆನು. ಭಾಷಾಭಿಮಾನಿಗಳಿಗೆ ಇದನ್ನು ಓದುವುದರಿಂದ ಕಿಂಚಿತ್ಸಂತೋಷವುಂಟಾದರೂ ನನ್ನ ಭಾಷಾಸೇವಾ ಪ್ರಯತ್ನವು ಸಾರ್ಥಕವೆಂದು ಭಾವಿಸುವೆನಲ್ಲದೆ, ದೋಷಗಳನ್ನು ಮನ್ನಿಸಿ, ಗುಣ ಲೇಶದಿಂದ ಸಂತೋಷಿಸುವ ಅಭಿಜ್ಞರಿಗೆ ನಾನು ಕೃತಜ್ಞತೆಯಿಂದ ವಂದಿಸುವೆನು.

ಈ ನಾಟಕ ಲೇಖನಕ್ಕೆ ನನಗೆ ಪ್ರೋತ್ಸಾಹವನ್ನು ಕೊಟ್ಟು ಗೌರವಿಸಿದ ಮ|| ಶ್ರೀ|| ನಾಟಕ ಕಂಠೀರವ ಜಿ. ಎಚ್. ವೀರಣ್ಣನವರಿಗೂ, ನನಗೆ ಕಥಾ ಭಾಗವನ್ನು ಹಿಂದಿಯಲ್ಲಿ ಹೇಳಿದ ನಮ್ಮ ಮಿತ್ರರಿಗೂ, ಮಹಾರಾಷ್ಟ್ರ ನಾಟಕ ಕರ್ತರಿಗೂ ನಾನು ನನ್ನ ಕೃತಜ್ಞತಾಪೂರ್ವಕವಾದ ವಂದನೆಗಳನ್ನು ಅರ್ಪಿಸುವುದಲ್ಲದೆ, ಈ ನಾಟಕವನ್ನು ರಂಗದ ಮೇಲೆ ಯೋಗ್ಯ ರೀತಿಯಿಂದ ಅಭಿನಯಿಸಿದ ನಟವರ್ಯರಿಗೂ ನನ್ನ ಅಭಿನಂದನೆಗಳನ್ನು ಅರ್ಪಿಸುತ್ತೇನೆ.

ಈ ಪುಸ್ತಕವನ್ನು ನನ್ನ ಇಷ್ಟದಂತೆ ಅಂದವಾಗಿ ಮುದ್ರಿಸಿಕೊಟ್ಟು ನನಗೆ ಪ್ರೋತ್ಸಾಹಮಾಡಿದ ಬೆಂಗಳೂರು ಪಿ. ಟಿ. ಐ. ಬುಕ್ ಡಿಪೋ ಪ್ರೊಪ್ರೈಟರರಾದ ಮ|| ರಾ|| ಸಿ. ಕೃಷ್ಣರಾವ್, ಬಿ. ಎ. ಯವರಿಗೆ ನಾನು ಚಿರ ಕೃತಜ್ಞನಾಗಿದ್ದೇನೆ.

೧೬-೧-೧೯೩೫
ಬೆಂಗಳೂರು ನಗರ

ಬೆಳ್ಳಾವೆ ನರಹರಿಶಾಸ್ತ್ರಿ

# ಪಾತ್ರಗಳು

## ಪುರುಷರು

ತುಕಾರಾಮ—ಸಾಧು

ಮಹಾದೇವ—ತುಕಾರಾಮನ ಮಗ

ಶಿವಾಜಿ—ಮಹಾರಾಜ

ಪಂಡಿತರಾವ್—ಶಿವಾಜಿಯ ಕಡೆಯ ಅಧಿಕಾರಿ

ಹಿರೋಜಿ—ಶಿವಾಜಿಯ ಕಡೆಯ ಸೇನಾನಿ

ಮಂಬಾಜಿ—ಕಪಟ ಸಾಧು

ತುಂಬಾಜಿ—ಮಂಬಾಜಿಯ ಶಿಷ್ಯ

ಬಾಲಾಜಿ—ತುಂಬಾಜಿಯ ಸ್ನೇಹಿತ

ಭೈರವ ಸಾಧು—ಮಂಬಾಜಿಯ ಸ್ನೇಹಿತ

ತ್ರಿವಿಕ್ರಮ ಸಾಧು—ಮಂಬಾಜಿಯ ಸ್ನೇಹಿತ

ರಹಮತ್ ಖಾನ್—ಬಿಜಾಪುರದ ಬಾದುಷಹನ ಕಡೆಯ ಸೇನಾನಿ

ದಿಲಾವರ್ ಖಾನ್— ,,

## ಸ್ತ್ರೀಯರು

ಜಿಜಾಬಾಯಿ—ತುಕಾರಾಮನ ಪತ್ನಿ

ಸಯಿರಾಬಾಯಿ—ಶಿವಾಜಿಯ ಪತ್ನಿ

ಕಾಶೀಬಾಯಿ—ತುಕಾರಾಮನ ಮಗಳು

ರಂಭೆ—ವೇಶ್ಯೆ

ಸಾಧು ಶಿಷ್ಯರು, ಬ್ರಾಹ್ಮಣರು, ಅಧಿಕಾರಿಗಳು,
ಭಕ್ತರು ಮೊದಲಾದವರು.

---

ಸೂಚನೆ:—ಮುಂದಿನ ಪುಟಗಳಲ್ಲಿ, ಪಾತ್ರಗಳ ಹಿಂದೆ ಮುಂದೆ ಅಲ್ಲಲ್ಲಿ ಹಾಕಿರುವ ಸಂಖ್ಯೆಗಳು, ಪುಸ್ತಕದ ಕಡೆಯಲ್ಲಿ ಕೊಟ್ಟಿರುವ ಅನುಬಂಧದ ಆಯಾ ಸಂಖ್ಯೆಯ ಹಾಡುಗಳನ್ನು ಉಪಯೋಗಿಸಿಕೊಳ್ಳಬೇಕಾದ ಸ್ಥಳಗಳನ್ನು ಸೂಚಿಸುವುವು.

ಶ್ರೀರಸ್ತು.

# ತು ಕಾ ರಾ ಮ

## ನಾಟಕಂ



**॥ ನಾಂದಿ ॥**

**ವೃ॥**

ಶ್ರೀವಿದ್ಯುತ್ಕೋಟಿ ತೇಜೋಮಯಮಖಿಲ ಜಗನ್ಮೋಹನಾಕಾರನಾಸಂ।
ದಾವಾಸಂ ರಾಸಕೇಳೀ ಸುಮಧುರ ಮುರಳೀಗಾನ ಸಂಮೋಹಿತ ಶ್ರೀ ||
ದೇವಾಧೀಶಂ ಸಮಸ್ತಾಮರ ಮುನಿಶರಣಂ ಭವ್ಯ ಚೈತನ್ಯರೂಪಂ।
ದೇವಂ ಶ್ರೀರುಕ್ಮಿಣೀಶಂ ಕರುಣಿಸುಗೆಮಗಾನಂದವಂ ವಾಸುದೇವಂ ॥೧॥



**ಸೂತ್ರಧಾರ**—(ಕುಸುಮಾಂಜಲಿಯಿಂದ ರಂಗವನ್ನರ್ಚಿಸಿ)

ದೈವಭಕ್ತಾಗ್ರಣಿಗಳಾದ ರಸಿಕ ವಿದ್ವಜ್ಜನರಿಂದ ಶೋಭಿಸುವ ಈ ಸಭೆಯನ್ನು ನೋಡಿ ನನಗಾನಂದವಾಯಿತು. ಇಂತಹ ಸಭ್ಯರನ್ನು ನಾಟಕಾಭಿನಯದಿಂದ ಆನಂದಪಡಿಸಿದರೆ ಅಲ್ಲವೇ ನಮ್ಮ ನಟರ ಕಲಾ ಕೌಶಲವು ಸಾರ್ಥಕವೆನಿಸುವುದು! (ಪಕ್ಕಕ್ಕೆ ನೋಡಿ) ಆರ್ಯೇ!

**ನಟಿ**—(ಪ್ರವೇಶಿಸಿ) ಆರ್ಯಾ! ಇದೋ! ಬಂದೆನು. ಮತ್ತೇನು?

**ಸೂತ್ರಧಾರ**—ದೈವಭಕ್ತಾಗ್ರಣಿಗಳೂ ಸಂಗೀತ ಸಾಹಿತ್ಯ ಕಳಾ ಕುಶಲರೂ ಆದ ಸಭ್ಯರು ಇಲ್ಲಿ ನೆರೆದಿರುವರು. ಇವರನ್ನು ನೂತನ ನಾಟಕಾಭಿನಯದಿಂದ ಆನಂದಿಸುವುದಲ್ಲವೇ ನಮ್ಮ ಕರ್ತವ್ಯವು!

**ನಟಿ**—ನಿಜ. ಈಗ ನಾವು ಯಾವ ನಾಟಕವನ್ನಭಿನಯಿಸಬೇಕೆಂದು ನಿನ್ನ ಅಭಿಪ್ರಾಯವು?

**ಸೂತ್ರಧಾರ—**

**ಕಂ॥** ನರಸಿಂಹ ಕೃಪಾನುಗ್ರಹ।
ಪರಿಲಬ್ಧ ಮನೋಜ್ಞ ಸರಸ ಕವಿತಾಭರಣಂ॥
ನರಹರಿಕವಿಯೊರೆದಾ ಹರಿ।
ಶರಣ ತುಕಾರಾಮ ಚರಿತಮಭಿನಯ ಯೋಗ್ಯಂ ॥೨॥

ಆ ಮಹಾತ್ಮ ತುಕಾರಾಮ ನಾಟಕವನ್ನಭಿನಯಿಸುವಂತೆ ಈ ಸಭಿಕರು ನನಗಾಜ್ಞೆಮಾಡಿರುವರು.

**ನಟ**—ಸಂತೋಷ! ಹಾಗೆಯೇ ಮಾಡೋಣ. ನಮ್ಮ ಕುಶೀಲವರೂ ಗಾಯಕರೂ ಸಿದ್ಧರಾಗಿಯೇ ಇರುವರು.

**ಸೂತ್ರಧಾರ**—ಹಾಗಾದರೆ, ಮೊದಲು ಈಗ ಸಂಧಿಸಿರುವ ಗ್ರೀಷ್ಮಋತುವನ್ನು ವರ್ಣಿಸಿ ಗಾನಮಾಡು.

**ನಟ**—ಅಪ್ಪಣೆ.

೨ **ಕಂ॥** ಪಾದರಿಯಲರಿಂ ಪರಮಾ।
ಮೋದವಸುರೆ ಬೀರ್ವ ಮಂದಮಾರುತನಿಂ ತಾ॥
ನೂದುತೆ ಮದನಾನಲಸಂ।
ಭೇದಿಪುದಾ ವಿರಹಿ ಜನದ ಮನಮಂ ಗ್ರೀಷ್ಮಂ ॥೩॥

**ಸೂತ್ರಧಾರ**—ಆಹಾ! ಚೆನ್ನಾಗಿ ಗಾನಮಾಡಿದೆ. **(ಪಕ್ಕಕ್ಕೆ ನೋಡಿ)** ಓಹೋ! ಈಕಡೆ ನೋಡು. ಸಾಧುಸಂರಕ್ಷಕನೂ ದೈವಭಕ್ತ ಶಿರೋಮಣಿಯೂ ಆದ ಶಿವಾಜಿ ಮಹಾರಾಜನು ಮಹಾತ್ಮ ತುಕಾರಾಮರ ಸಂದರ್ಶನ ಮಾಡುವ ಕುತೂಹಲದಿಂದ ಪತ್ನಿಯೊಡನೆ ಮಾತನಾಡುತ್ತ ರಂಗಪ್ರವೇಶ ಮಾಡಿರುವನು. ಇನ್ನು ನಾವು ಮುಂದಿನ ಕಾರ್ಯಗಳನ್ನು ಗಮನಿಸೋಣ ನಡೆ.

**ನಟ**—ಅಪ್ಪಣೆ. (ಹೋಗುವರು.)

ಇದು ಪ್ರಸ್ತಾವನೆ.



## ದೃಶ್ಯ ೧—ಶಿವಾಜಿ ಮಹಾರಾಜನ ಅರಮನೆ

(ಶಿವಾಜಿಯು ಪತ್ನಿಯಾದ ಸಯಿಾಬಾಯಿಯೊಡನೆ ಮಾತನಾಡುತ್ತಿರುವನು.)

**ಶಿವಾಜಿ**—ಪ್ರಿಯೇ,

೧ **ಕಂ॥** ಪರಮೋಪದೇಶದಿಂದಿಹ।
ಪರ ಸುಖಮಾರ್ಗವನೆ ತೋರಿ ಮೋಹಾಂಧತೆಯಂ ||
ಪರಿಹರಿಸುತೆ ಸುಜ್ಞಾನ।
ಸ್ಫುರಣ ಜ್ಯೋತಿಯನೆ ತೋರ್ಪ ಗುರುಗೆಣೆಯುಂಟೇ ||೪||

ಪ್ರಪಂಚದಲ್ಲಿ ಮನುಷ್ಯನು ಜನ್ಮವೆತ್ತಿದಮೇಲೆ ದೈವಕೃಪೆಗೆ ಪಾತ್ರನಾಗಿ ಇಹ ಪರಾನಂದಗಳನ್ನು ಪಡೆಯುವ ಮಾರ್ಗವನ್ನು ಹುಡುಕಬೇಕಾದುದೇ ಕರ್ತವ್ಯವು. ಜ್ಞಾನಮಾರ್ಗ ಪ್ರವರ್ತಕನಾದ ಗುರುವಿನ ಕೃಪೆಯಿಂದಲ್ಲದೆ ಅದು ಸಾಧ್ಯವಲ್ಲ. ಆದಕಾರಣ ಪರಮ ವೈರಾಗ್ಯ ಚಕ್ರವರ್ತಿಯೆನಿಸಿ ಭಕ್ತ ಜನರ ಅಜ್ಞಾನವನ್ನು ಪರಿಹರಿಸಿ ಚಿಜ್ಜ್ಯೋತಿ ಸ್ವರೂಪನ ಸಾಕ್ಷಾತ್ಕಾರವನ್ನು ಪಡೆಯಲು ಮಾರ್ಗವನ್ನು ತೋರಿಸಿ ಅನೇಕರನ್ನು ಧನ್ಯರನ್ನಾಗಿ ಮಾಡುತ್ತಿರುವ ಶ್ರೀ ತುಕಾರಾಮ ಸಾಧುಗಳ ಸೇವೆಮಾಡಿ ಕೃತಾರ್ಥನಾಗಬೇಕೆಂಬಾಸೆಯು ದಿನ ದಿನಕ್ಕೆ ನನಗೆ ಹೆಚ್ಚುತ್ತಿರುವುದು. ಆದುದರಿಂದ ಅವರನ್ನು ನಮ್ಮ ಅರಮನೆಗೆ ಕರೆಯಿಸೋಣವೇ ?

**ಸಯಿಾಬಾಯಿ**—(೪) ಆರ್ಯಪುತ್ರಾ! ಆ ಮಹಾತ್ಮ ತುಕಾರಾಮರು ಕೇವಲ ವೈರಾಗ್ಯ ಚಕ್ರವರ್ತಿಯೆಂದು ಹೇಳಿದಿರಲ್ಲವೇ! ಪ್ರಪಂಚ ಸಂಬಂಧವನ್ನೇ ತೃಣೀಕರಿಸಿರುವ ಆ ಮಹನೀಯರು ಇಲ್ಲಿಗೆ ಬರಲು ಸಮ್ಮತಿಸುವರೋ ಇಲ್ಲವೋ! ನಾವೇ ಏತಕ್ಕೆ ಅವರ ಸನ್ನಿಧಿಗೆ ಹೋಗಿ ಅವರನ್ನು ಸೇವಿಸಿ ಬರಬಾರದು ? ಅಥವಾ ಭಾಗ್ಯವಂತರೆನಿಸಿದ ರಾಜರಾದ ತಾವು ಅವರನ್ನು ತಮ್ಮಲ್ಲಿಗೇ ಬರಮಾಡಿಕೊಳ್ಳುವುದು ಗೌರವಾಸ್ಪದವೆಂದೆಣಿಸಿದಿರೋ ?

**ಶಿವಾಜಿ**—(ಆಲೋಚಿಸಿ ಪಶ್ಚಾತ್ತಾಪದಿಂದ) ಪ್ರಿಯೇ! ನಿಜ! ನಾನು ಸ್ವಲ್ಪ ಅಜ್ಞಾನಕ್ಕೆ ಸಿಕ್ಕಿದ್ದೆನು. ವಿವೇಕ ಶಾಲಿನಿಯಾದ ನೀನು ನನ್ನನ್ನು ಎಚ್ಚರಿಸಿದೆ. ಗುರುಸನ್ನಿಧಿಯೇ ದೈವಸನ್ನಿಧಿಯು; ಅಲ್ಲಿಗೆ ಹೋಗಲು ಭಾಗ್ಯವಂತರು, ಬಡವರು, ಎಂಬ ತಾರತಮ್ಯಗಳು ಲೇಶವೂ ಇಲ್ಲ. ನಾನೇ ಆ ಮಹಾತ್ಮರ ಸನ್ನಿಧಿಗೆ ಹೋಗಿ ಅವರ ದರ್ಶನಾಶೀರ್ವಾದ ಗಳನ್ನು ಪಡೆದು ಬರುವೆನು. ಅನಂತರ ಅವರು ಸಂತೋಷದಿಂದ ಸಮ್ಮತಿಸಿ ಬರುವುದಾದರೆ ನಮ್ಮ ಅರಮನೆಗೂ ಅವರನ್ನು ಕರೆತಂದು ಪೂಜಿಸೋಣ.

**ಸಯಿರಾಬಾಯಿ**—ಆಗಬಹುದು; ಬಹಳ ಸಂತೋಷ! ಆದರೆ ಆ ತುಕಾ ರಾಮ ಸಾಧುಗಳು ಕೇವಲ ಬಡವರೆಂತಲೂ ಅವರಿಗೆ ನಿತ್ಯ ಗೃಹಕೃತ್ಯ ಗಳು ನಡೆಯುವುದೇ ಬಹಳ ಕಷ್ಟವಾಗಿದೆಯೆಂತಲೂ ಜನರು ಹೇಳಿ ಕೊಳ್ಳುತ್ತಿರುವುದಾಗಿ ನಮ್ಮ ಚೇಟಿಯರಿಂದಲೂ ಸಖಿಯರಿಂದಲೂ ತಿಳಿಯಿತು. ದೈವಭಕ್ತರಿಗೂ ದಾರಿದ್ರ್ಯಪಿಶಾಚದ ಕಾಟವು ತಪ್ಪ ಲಿಲ್ಲವೇ?

**ಶಿವಾಜಿ**—ದೈವಕೃಪೆಯೆಂಬ ಪರಮೈಶ್ವರ್ಯದಲ್ಲಿ ತೇಲುತ್ತಿರುವ ತುಕಾ ರಾಮರಿಗೆ ದಾರಿದ್ರ್ಯವೇ? ದೈವಸನ್ನಿಧಿಯಲ್ಲಿಯೂ ಪಿಶಾಚದಕಾಟವೇ?

**ಸಯಿರಾಬಾಯಿ**—ಇಲ್ಲ, ನಿರ್ಲಿಪ್ತರಾದ ಆ ಮಹಾನುಭಾವರಿಗೆ ದಾರಿ ದ್ರ್ಯದ ಚಿಂತೆಯಿಲ್ಲ. ಅನ್ನಪಾನಗಳಿಗೆ ಪ್ರತಿಯಾಗಿ ಹರಿಧ್ಯಾನವೇ ಅಮೃತಪಾನವಾಗಿರುವುದು. ಆದರೂ ಅವರನ್ನು ನಂಬಿರುವ ಪತ್ನೀ ಪುತ್ರರು ಈ ಪಾಂಚಭೌತಿಕ ಶರೀರವನ್ನು ಕಾಪಾಡಿಕೊಂಡು ಅವರ ಸೇವೆ ಮಾಡಲು ಅವರಿಗಾದರೂ ತಕ್ಕ ಆನುಕೂಲ್ಯವಿರಬೇಕಲ್ಲವೇ?

**ಶಿವಾಜಿ**—ನಿಜ!

**ಸಯಿರಾಬಾಯಿ**—ಸಾಧು ಸತ್ಪುರುಷರ ಕ್ಷೇಮಚಿಂತನೆಯನ್ನು ಮಾಡು ವುದು ರಾಜ್ಯಾಧಿಪತಿಗಳ ಕರ್ತವ್ಯವಲ್ಲವೇ?

**ಶಿವಾಜಿ**—ಅಹುದು! ಅಹುದು!! ಚೆನ್ನಾಗಿ ಹೇಳಿದೆ. ನಿನ್ನ ಭಾವವು ನನ್ನ ಮನಸ್ಸಿಗೆ ಬಂತು. ಈಗಲೇ ಧನಧಾನ್ಯ ವಸ್ತ್ರಭೂಷಣಾದಿ

ಗಳನ್ನು ಮಹಾತ್ಮ ತುಕಾರಾಮರವರ ಸನ್ನಿಧಿಗೆ ನನ್ನ ವಿಜ್ಞಾಪನೆ ಯೊಡನೆ ಅರ್ಪಿಸಿ ಬರುವಂತೆ ಪ್ರಧಾನ ಪಂಡಿತರಾಯರನ್ನು ಹಿರೋಜೇ ನಾಯಕನೊಡನೆ ಕಳುಹಿಸಿಕೊಟ್ಟು, ಅನಂತರ ನಾನು ಹೋಗಿ ಆ ಪೂಜ್ಯರ ಸಂದರ್ಶನವನ್ನು ಮಾಡುವೆನು. ಆಗಬಹುದೋ ?

**ಸಯಿಾಬಾಯಿ**—ಬಹಳ ಸಂತೋಷ. ತಾವು ಅವರ ಅನುಗ್ರಹಾಶೀ ರ್ವಾದಗಳನ್ನು ಪಡೆದು, ಅನಂತರ ಅವರು ಸಮ್ಮತಿಸಿದರೆ ಅವರನ್ನು ನಮ್ಮ ಅರಮನೆಗೂ ಕರೆತರಬೇಕು.

**ಶಿವಾಜಿ**—ಆಗಬಹುದು. ನಾನೂ ಅದರಂತೆಯೇ ಆಲೋಚಿಸಿರುವೆನು.

## ದೃಶ್ಯ ೨—ದೇವನಗರದ ಬೀದಿ

(ಮಂಬಾಜಿಯೆಂಬ ಕಪಟ ಸಾಧು ಪ್ರವೇಶಿಸುವನು.)

**ಮಂಬಾಜಿ**—ತುಕ್ಕನು ತುಕ್ಕಾರಾಮ ಸಾಧುವೆನಿಸಿದನೇ! ಆಹಾ! ಎಲವೋ ತುಕ್ಕಾ! ಠಕ್ಕಾ! ಅಲ್ಪಜ್ಞನೂ ಕ್ಷುದ್ರ ವಣಿಜನೂ ಆದ ನೀನು ಈ ಮಂಬಾಜೀ ಸಾಧು ಮಹಾರಾಜನಂತೆ ಸಾಧುವಾಗ ಬಲ್ಲೆಯಾ! ಆಹಾ! ವರ್ಣದಲ್ಲಿಯೂ ಗುಣದಲ್ಲಿಯೂ ಶಕ್ತಿಯಲ್ಲಿಯೂ ನಮಗಿಂತಲೂ ಕೀಳಾದ ನೀನು ಸಾಧುವೆನಿಸುವುದಾದರೆ ಕರಿಯ ಕಾಗೆಯನ್ನೂ ರಾಜಹಂಸವೆಂದು ಹೇಳಬೇಕಾದೀತು! ಮುಖ್ಯವಾಗಿ ಕಾಲವು ಕೆಟ್ಟಿತು! ಉಚ್ಚನೀಚಭಾವಗಳು ಮಾಯವಾದವು, ನಿಜ ವಾದ ಗುರುಶಿಷ್ಯಭಾವಗಳು ನಿರ್ನಾಮವಾದವು, ಜಾತಿಮತಗಳ ತಾರತಮ್ಯಗಳು ಹಾಳಾಗುತ್ತ ಬಂದವು! ಮಾಡುವುದೇನು! ನಮ್ಮಂತಹ ಸತ್ಪುರುಷರ ಸೇವೆಯಿಂದ ಜೀವನಮಾಡಿಕೊಂಡು ಬಿದ್ದಿರ ಬೇಕಾದ ನೀನು ಸಾಧುವೆಂದು ಮೆರೆಯಲಾರಂಭಿಸಿದೆಯಾ? ಗುರು ವೆಂದು ಹೊಗಳಿಸಿಕೊಳ್ಳುತ್ತಿರುವೆಯಾ? ಉಪದೇಶಕನೆಂದು ನಟಿಸು ತ್ತಿರುವೆಯಾ? ಆಹಾ! ತುಕ್ಕಾ! ಮಹಾ ದೈವಭಕ್ತನೆಂತಲೂ ಪರಮ ಸಾಧುವೆಂತಲೂ ಅಟ್ಟಹಾಸದಿಂದ ಬೂಟಾಟಕದ ನಟನೆಮಾಡಿ ಜನರನ್ನಾಕರ್ಷಿಸಿ ನಮ್ಮ ಪ್ರಶಸ್ತಿಗೆ ಕುಂದನ್ನು ತಂದು ಮೆರೆಯು

ತ್ತಿರುವೆಯಲ್ಲವೇ! ಆಗಲಿ, ಎಷ್ಟು ಮೆರೆಯುವೆ, ಮೆರೆ, ನೋಡುವ! (ಆಲೋಚಿಸಿ) ಇರಲಿ, ದಿನ ದಿನಕ್ಕೆ ವೃದ್ಧಿಯಾಗುತ್ತಿರುವ ಈ ವಿಷ ವೃಕ್ಷಕ್ಕೆ ಕೊಡಲಿಯನ್ನು ಹಾಕಲೇಬೇಕು. ಆದುದರಿಂದ ಗ್ರಾಮ ಸಂಚಾರಕ್ಕೆ ಹೊರಟಿರುವ ನಾನು ಆ ತುಕ್ಕನ ಮನೆಗೆ ಹೋಗಿ, ಏನಾದರೂ ನೆಪದಿಂದ ಅವನಿಗವಮಾನಮಾಡಿ, ಜನರಿಗೆ ಅವನಲ್ಲಿ ತಿರಸ್ಕಾರ ಬುದ್ಧಿ ಹುಟ್ಟುವಂತೆ ಸಂಧಾನಮಾಡಿ, ಅವನ ಪ್ರಾಬಲ್ಯವನ್ನೂ ಪ್ರಶಸ್ತಿಯನ್ನೂ ಮುರಿದು, ನನ್ನ ಹೊಟ್ಟೆಯುರಿಯನ್ನು ತೀರಿಸಿಕೊಂಡು ನನ್ನ ಪ್ರಶಸ್ತಿಯನ್ನೇ ವಿಸ್ತರಿಸುವೆನು. (ಶಿಷ್ಯರನ್ನು ನೋಡಿ) ಎಲೈ ಶಿಷ್ಯರಿರಾ! ಬನ್ನಿ, ಈಗಲೇ ಆ ತುಕ್ಕನ ಮನೆಗೆ ಭಿಕ್ಷಾವ್ಯಾಜದಿಂದ ಹೋಗಿ ಅವನಿಗೆ ತಕ್ಕುದನ್ನು ಮಾಡುವ.

**ಶಿಷ್ಯರು**—ಅಪ್ಪಣೆ. ಈ ಮಾರ್ಗವಾಗಿಯೇ ದಯಮಾಡಿಸಬೇಕು.

(ಜ) (ಹೋಗುವರು.)

## ದೃಶ್ಯ ೩—ತುಕಾರಾಮನ ಮನೆ

(ತುಕಾರಾಮನೂ ಮಹಾದೇವನೆಂಬ ಆತನ ಮಗನೂ ಕಾಶೀಬಾಯಿಯೆಂಬ ಆತನ ಮಗಳೂ ಸಹ ವಿಠಲ ಭಜನೆ ಮಾಡುತ್ತಿರುವರು.)

೬

**ಮೂವರೂ**—ವಿಠ್ಠಲ ವಿಠ್ಠಲ ಜಯಜಯ ವಿಠ್ಠಲ । ವಿಠ್ಠಲ ವಿಠ್ಠಲ ಜಯಜಯ ವಿಠ್ಠಲ ॥

(ತುಕಾರಾಮನ ಪತ್ನಿಯಾದ ಜಿಜಾಬಾಯಿಯು ಕೋಪದಿಂದ ಪ್ರವೇಶಿಸುವಳು.)

**ಜಿಜಾಬಾಯಿ**—ವಿಠಲಾ! ವಿಠಲಾ!! ವಿಠಲಾ!!! ಎಲ್ಲಿಯ ಹಾಳು ವಿಠಲನು ಬಂದನಮ್ಮಾ ನಮ್ಮ ಪ್ರಾಣಕ್ಕೆ ಮೂಲವಾಗಿ! ಅಯ್ಯೋ ಗ್ರಹಚಾರವೇ! (ತುಕಾರಾಮನನ್ನು ನೋಡಿ) ಮನೆಯಲ್ಲಿ ಪಿಂಡಕ್ಕೆ ಮಾರ್ಗವಿಲ್ಲದೆ ಹಿಟ್ಟಿನ ಮಡಕೆಗಳು ಲೊಟಗುಟ್ಟುತ್ತಿದ್ದರೂ ನಿಮಗೆ ಯಾವಾಗಲೂ ವಿಠಲ ಭಜನೆ! ಹಾಳು ಭಜನೆ! ಈ ಭಜನೆಗೆ ಕೊನೆ ಮೊದಲೇ ಇಲ್ಲ. ಕಿವಿಗಳು ಚಿಟುಗುಟ್ಟಿ ಹೋಗುತ್ತಿವೆ! ಈ ನಿಮ್ಮ

ತಾಳವನ್ನೂ ಭಜನೆಯ ಗೋಳನ್ನೂ ಕೇಳಲಾರೆ. ನಿಮ್ಮ ಹಾಳು ಭಜನೆಗೆ ಬೆಂಕಿ ಹಾಕ! ನಿಲ್ಲಿಸಿ, ಸಾಕು.

**ತುಕಾರಾಮ**—(ಕಿವಿಗಳನ್ನು ಮುಚ್ಚಿ) ಪಾಂಡುರಂಗ! ಪಾಂಡುರಂಗ!! ಎಲೌ ಏತಕ್ಕೆ ಹಾಗೆನ್ನುವೆಯೋ! ನಮ್ಮ ಭಜನೆಯಿಂದ ನಿನಗೇನು ಕಷ್ಟವೇ? ಸಾಕು: ಹಾಗೆ ಕೋಪಿಸಬಾರದು, ಸಹಿಸು. ಏತಲ ಭಜನೆಯ ಮಹಿಮೆಯು ನಿನಗೆ ತಿಳಿಯದು.

**ಜಿಜಾಬಾಯಿ**—ತಿಳಿದಿರುವುದು, ಚೆನ್ನಾಗಿ ತಿಳಿದಿರುವುದು. ಈ ಏತಲ ಭಜನೆಯು ಹೆಚ್ಚಿಯೇ ಮನೆಯಲ್ಲಿ ದಿನದಿನಕ್ಕೆ ದಾರಿದ್ರ್ಯವು ಹೆಚ್ಚಾಯಿತು. ಸಾಕು ನಿಲ್ಲಿಸಿ.

(ಕಾಶಿ ಮಹಾದೇವ ಇಬ್ಬರೂ ಇನ್ನೂ ಹೆಚ್ಚಾಗಿ ಭಜನೆ ಮಾಡಲಾರಂಭಿಸುವರು.)

**ಜಿಜಾಬಾಯಿ**—ಎಲ್ಲಿಯ ಹಾಳು ಪಿಶಾಚಗಳಿವು! ಎಲೆ ಕಾಶೀ, ಎಲವೋ! ಮಹಾದೇವ, ಈ ನಿಮ್ಮ ಹಾಳು ಭಜನೆಯನ್ನು ನಿಲ್ಲಿಸುವಿರೋ ಅಥವಾ ನಿಮಗೆ ತಕ್ಕುದನ್ನು ಮಾಡಲೋ? (ಹೊಡೆಯಲು ಹೋಗುವಳು.)

**ಮಹಾದೇವ ಮತ್ತು ಕಾಶಿ**—(ತಪ್ಪಿಸಿಕೊಂಡು) ಅಮ್ಮಾ! ನಮ್ಮನ್ನೇತಕ್ಕೆ ಹೊಡೆಯುವೆಯಮ್ಮಾ. ಅಪ್ಪನು ಹೇಳಿದಂತೆ ನಾವು ಭಜನೆ ಮಾಡುತ್ತಿದ್ದೇವೆ.

**ಜಿಜಾಬಾಯಿ**—ನಿಮ್ಮಪ್ಪನಿಗೇನು! ಸಂಸಾರವೆಂಬ ಅಭಿಮಾನವೇ! ಸಂಪಾದನೆಯಮೇಲೆ ಗಮನವೇ! ಜನರು ದರಿದ್ರನೆಂದು ಪರಿಹಾಸ್ಯ ಮಾಡುವರೆಂಬ ಅವಮಾನವೇ! ಯಾವುದೂ ಇಲ್ಲ. ನಾಚಿಕೆಯಂತೂ ಮೊದಲೇ ಇಲ್ಲ.

**ತುಕಾರಾಮ**—ಎಲೌ, ನ್ಯಾಯವಾದ ಮಾತನ್ನು ಹೇಳಿದೆ. ಪರಮಾತ್ಮನಲ್ಲಿ ತನ್ನ ಚಿತ್ತವನ್ನು ಲೀನಮಾಡಿ, ಇಹಲೋಕ ಸುಖವನ್ನು ತೃಣಪ್ರಾಯವೆಂದು ತಿಳಿದು, ದೇಹಾಭಿಮಾನವನ್ನು ತ್ಯಜಿಸಿ, ಸದಾ ಹರಿಧ್ಯಾನ ಪರಾಯಣನಾಗಿರುವವನಿಗೆ, ಸಂಸಾರದಮೇಲೆ ಅಭಿಮಾನವೂ ಸಂಪಾದನೆಯಮೇಲೆ ಗಮನವೂ ಪರರ ಪರಿಹಾಸ್ಯದ ಅವಮಾನವೂ ಸ್ವಲ್ಪವೂ ಇರುವುದಿಲ್ಲ. ಅಂತಹ ಅಹಂಕಾರ ಮಮಕಾರಗಳೂ

ಮಾನಾಪಮಾನಗಳೂ ಇಲ್ಲದವನಿಗೆ ನಾಚಿಕೆಯು ತಾನೇ ಎಲ್ಲಿಂದ ಬರಬೇಕು ?

**ಜಿಜಾಬಾಯಿ**—ಸರಿ! ಸರಿ! ಊರಿನವರೆಲ್ಲರೂ ನಿಮ್ಮನ್ನು ದರಿದ್ರನೆಂದು ಅವಹೇಳನ ಮಾಡುತ್ತಿದ್ದರೂ ಸ್ವಲ್ಪವೂ ಚಿಂತೆಯಿಲ್ಲದಿರುವಿರಲ್ಲಾ! ಇದು ಸರಿಯೋ ?

**ಮಹಾದೇವ**—ಅಮ್ಮಾ! ಚಿಂತೆಯಿಲ್ಲದಿರುವುದರಿಂದಲೇ ಅಪ್ಪನು ಯಾವಾಗಲೂ ಶಾಂತನಾಗಿ ಸಂತೋಷದಿಂದಿರುವನು. ಅಪ್ಪನು ಸಾಧುವಲ್ಲವೇನಮ್ಮಾ ?

**ಜಿಜಾಬಾಯಿ**—ಆಹಾಹಾ! ಏನು ಶಾಂತಿಯೋ! ಏನು ಸಂತೋಷವೋ! ಏನು ಸಾಧುತನವೋ ಕೇಳಲಾರೆ! ಮರದ ಮಣಿಯ ಸರಗಳನ್ನು ಕುತ್ತಿಗೆಗೆ ಹಾಕಿಕೊಳ್ಳುವುದು, ಗೋಪೀ ಚಂದನದ ಮಣ್ಣನ್ನು ಮೈಗೂ ಮುಖಕ್ಕೂ ಪಟ್ಟೆ ಹಾಕಿಕೊಳ್ಳುವುದು, ತಂಬೂರಿ ಮಿಾಟುವುದು, ತಾಳವನ್ನು ಕುಟ್ಟುವುದು. ತಂತಿ ಕಡಿದರೂ ಸರಿಯೆ, ತಾಳ ಸಿಡಿದರೂ ಸರಿಯೆ, ತಲೆ ಒಡೆದರೂ ಸರಿಯೆ! ಇದೇ ನಿಮ್ಮಪ್ಪನ ಸಾಧುತನ!

**ತುಕಾರಾಮ**—ಎಲೌ ಇಷ್ಟೇನೇ ನಿನಗೆ ತಿಳಿದಿರುವುದು ?

**ಜಿಜಾಬಾಯಿ**—ಇಷ್ಟು ಮಾತ್ರವೇ ಅಲ್ಲ, ಕೇಳಿ, (**ಪರಿಹಾಸ್ಯಮಾಡುತ್ತ**) ನಿಮಗೆ ಕೈಯಲ್ಲಿ ಚಿಟಿಕೆ, ನಮಗೆ ಮನೆಯಲ್ಲಿ ಮಡಕೆಗಳು ಲೊಟಿಕೆ. ನಿಮಗೆ ಕೈಯಲ್ಲಿ ತಾಳ, ನಮಗೆ ಹೊಟ್ಟೆಯಲ್ಲಿ ಮೇಳ. ನಿಮಗೆ ಊರಲ್ಲಿ ಅಲೆದಾಟ, ನಮಗೆ ಕೂಳಿಲ್ಲದೆ ಗೋಳಾಟ. ಸಂಪಾದನೆ ಪೂಜ್ಯ, ಸಂಸಾರದಲ್ಲಿ ವ್ಯಾಜ್ಯ. ಹೆಂಡತಿ ಮಕ್ಕಳನ್ನಂತೂ ಕಾಪಾಡುವ ಹಾಗಿಲ್ಲ. ಇದೇ ನಿಮ್ಮ ಸಾಧುತನ.

**ತುಕಾರಾಮ**—(ನಗುವನು.)

**ಜಿಜಾಬಾಯಿ**—'ಇಹ್ಹಿಹ್ಹಿಹ್ಹಿ' ಎಂದು ಹದಿನಾರು ಹಲ್ಲನ್ನೂ ಬಿಟ್ಟು ಸಕ್ಕರೇನು ಫಲ? ನಾನು ಹೇಳಿದುದೆಲ್ಲವೂ ಅರಣ್ಯರೋದನವೇನೋ ? ಅಥವಾ ನಿಮ್ಮ ಮನಸ್ಸಿಗೇನಾದರೂ ತಿಳಿಯಿತೋ ?

**ತುಕಾರಾಮ**—ಎಲಾ, ಇದೆಲ್ಲವೂ ಮೊದಲೇ ನನಗೆ ತಿಳಿದಿತ್ತು. (೭) ಅನಾದಿಯಾದ ಈ ಆತ್ಮಕ್ಕೆ ಇಂತಹ ಅನುಭವಗಳು ಎಷ್ಟೋ ಆಗಿ ಪ್ರಪಂಚವೆಲ್ಲವೂ ವಿಠಲಮಯವೆಂದು ನನ್ನ ಗೋಚರಕ್ಕೆ ಬಂದಿದೆ. ವಿಠಲನು ನಿನ್ನ ಮುಖದಿಂದ ಈ ರೀತಿಯಾಗಿ ಮಾತನಾಡಿಸಿ ನನ್ನನ್ನು ನಾನಾ ವಿಧಗಳಲ್ಲಿ ಪರೀಕ್ಷಿಸುತ್ತಿರುವನೆಂದು ನಕ್ಕೆಸಲ್ಲದೆ ಬೇರೆಯಿಲ್ಲ.

(ಮಂಬಾಜಿಯು ಆಂಜನೇಯ ಭಜನೆಮಾಡುತ್ತ ಶಿಷ್ಯರೊಡನೆ ಭಿಕ್ಷಾರ್ಥಿಯಾಗಿ ಪ್ರವೇಶಿಸುವನು.)

**ಮಂಬಾಜಿ**— (೮)

**ಕಂ॥** ಜಯ ಜಯ ಮಹಿಮ ನಿಶಾಂತಾ।
ಜಯ ಜಯ ಘನ ಶಾಂತ ಲೋಕನುತ ಧೀಮಂತಾ ||
ಜಯ ರಾಮಚಂದ್ರ ಸನ್ನುತಿ।
ಮಯ ವಿಮಲಸ್ವಾಂತ ಜಯ ಮಹಾ ಹನುಮಂತಾ ||೫||

ಜಯ ವೀರಾಂಜನೇಯ ಭಗವನ್.

**ಜಿಜಾಬಾಯಿ**—(**ನೋಡಿ**) ಅಯ್ಯೋ ಗ್ರಹಚಾರವೇ ! ಇವರು ಯಾರಮ್ಮಾ ಈ ಬೂಟಾಟಕದ ದಾಸಯ್ಯಗಳು ! ಏಕಾದಶಿಯ ಮನೆಗೆ ಶಿವರಾತ್ರಿ ನುಗ್ಗಿದ ಹಾಗೆ............

**ಮಹಾದೇವ**—ಇವರು ನಮ್ಮ ಊರಲ್ಲಿರುವ ಮಂಬಾಜಿಸಾಧುಗಳಮ್ಮಾ.

**ಜಿಜಾಬಾಯಿ**—ಸರಿ!......ಮಂಬಾಜಿ ಸಾಧುವೋ ! ಗಿಂಬಾಜೀ ಸಾಧುವೋ ! ನಮಗೇನಾಗಬೇಕಾಗಿದೆ! ನಮ್ಮ ಕಷ್ಟ ನಮ್ಮದು ! ಇವರನ್ನು ಯಾರು ಅಕ್ಷತೆಕೊಟ್ಟು ಇಲ್ಲಿಗೆ ಬರಬೇಕೆಂದು ಕರೆದವರು ! (**ಮುಂದೆ ಬಂದು**) ಎಲೈ, ಸುಮ್ಮನೆ ಬಾಯಿಮುಚ್ಚಿಕೊಂಡು ಬಂದ ದಾರಿ ಹಿಡಿದು ಸಾಗಿಹೋಗುವಿರೋ ? ಅಥವಾ ಬೇಕೋ ನಾಲ್ಕು ಬಿಸಿಬಿಸಿಯಾಗಿ ?

**ತುಕಾರಾಮ**—(**ಕೈಹಿಡಿದು ತಡೆದು**) ಎಲೆ ಎಲೆ! ನಿನಗೇತಕ್ಕೆ ಇಂತಹ ಹುಚ್ಚು ಹಿಡಿಯಿತೇ ? ಕಂಡಕಂಡವರ ಮೇಲೆಲ್ಲ ಹುಚ್ಚುನಾಯಿಯಂತೆ ಎರಗುವೆಯಲ್ಲಾ !

**ಭಾ॥** ಅತಿಥಿಗಳ ರೂಪದೊಳಗಭ್ಯಾ।
ಗತರ ವೇಷದೊಳವುಳ ವಿಪ್ರಾ।
ಕೃತಿಯೊಳರ್ಥಿಗಳಂದದೊಳು ಸಾಧು ಸ್ವರೂಪದೊಳು ||
ಕ್ಷಿತಿಯೊಳೈತಂದೆಮ್ಮನಾ ಶ್ರೀ।
ಪತಿಯೆ ಪರಿಕಿಪನಾದ ಕತದಿಂ।
ಹಿತದೆ ಸೇವಿಸಲರ್ಥಿಜನಗಳ ನೊಲಿವ ವಿಠ್ಠಲನು ||೬||

ಆದಕಾರಣ ಇಂತಹ ಸಾಧುಗಳು ಬಂದರೆ, ನಮಗಿದ್ದುದರಲ್ಲಿ ಒಂದು ಹಿಡಿ ಭಿಕ್ಷವನ್ನಾದರೂ ಕೊಟ್ಟು ಸತ್ಕರಿಸುವುದೇ ಧರ್ಮವು, ಸಾಧುನಿಂದನೆಯನ್ನೆಂದಿಗೂ ಮಾಡಬಾರದು.

**ಜಿಜಾಬಾಯಿ**—ಕಡೆಗೂ, "ಸಾಧು! ಸಾಧು!" ಎಂದು ಅದೇ ಮಾತನ್ನೇ ಹೇಳುವಿರಲ್ಲಾ! ಇವರಿಗೇನು ಬಂದಿರುವುದು ಕೇಡು? ಕಲ್ಲು ಹೊತ್ತಾಗಲಿ, ಕಸ ಗುಡಿಸಿಯಾಗಲಿ, ಕಾಸನ್ನು ಸಂಪಾದಿಸಿ ಹೆಂಡತಿಮಕ್ಕಳನ್ನು ಸಾಕಿ ಮಾನವಾಗಿ ಜೀವನಮಾಡಬಾರದೇ! ಅದನ್ನು ಬಿಟ್ಟು, ಆಹಾಹಾ! ಈ ಪಟ್ಟೆ ನಾಮಗಳೇನು! ಈ ಸುಟ್ಟ ಜಪಮಾಲೆಗಳೇನು! ಆಳಿಗಾಕಾರ ಬಾಳಿಗೆ ಬಡುಕೊಳ್ಳ ಬೇಕು. ಇಂಥವರಿಗೆ ಸತ್ಕಾರಮಾಡಬೇಕಂತೆ! ಸತ್ಕಾರ!! (**ಒಳಗೆ ಹೋಗುವಳು.**)

**ತುಕಾರಾಮ**—(**ಮಂಬಾಜಿಗೆ ಕೈಮುಗಿದು**) ಸ್ವಾಮಿಾ, ಸಾಧು ಮಹನೀಯರೇ ಕ್ಷಮಿಸಿ, ದಯಮಾಡಿ ಸ್ವಲ್ಪ ನಿಲ್ಲಿ, ಭಿಕ್ಷೆಯನ್ನು ತರುವೆನು.

(**ಬೊಗಸೆಯಲ್ಲಿ ಹಿಟ್ಟನ್ನು ತಂದು ಭಿಕ್ಷವನ್ನು ಕೊಡುತ್ತಿರುವಷ್ಟರಲ್ಲಿ,**)

**ಜಿಜಾಬಾಯಿ**—(**ಓಡಿಬಂದು**) ಕಡೆಗೂ ಅವರಿಗೆ ಭಿಕ್ಷವನ್ನು ತಂದಿರಾ? (**ತುಕಾರಾಮನ ಕೈಯನ್ನು ತಡೆಯಲು ಬರುವಳು. ಹಿಟ್ಟೆಲ್ಲವೂ ಚೆಲ್ಲಿ ಮಂಬಾಜಿಯ ಮುಖ ಮೂಗು ಕಣ್ಣುಗಳ ಮೇಲೆ ಬೀಳುವುದು.**)

**ಮಂಬಾಜಿ**—(**ಕೋಪದಿಂದ ಮುಖವನ್ನೊರಸಿಕೊಳ್ಳುತ್ತ**) ಎಲವೋ ತುಕಾರಾಮಾ! ದುಷ್ಟ! ಭ್ರಷ್ಟಾ! ಪಾಪಿಷ್ಠಾ! ಸಾಧುವಿನಂತೆ ನಟಿಸುತ್ತ

ಗಂಡಹೆಂಡಿರು ವ್ಯಾಜ್ಯವಾಡುವ ನೆಪವನ್ನು ಹೂಡಿ, ನನಗವಮಾನ ಮಾಡಿ, ಈ ರೀತಿ ಸಾಧುದ್ರೋಹಮಾಡಿರುವೆಯಾ? ಅಯೋಗ್ಯಾ? ದುರಾತ್ಮಾ! ದುರಹಂಕಾರೀ!

**ಜಿಜಾಬಾಯಿ**—(ಮಂಬಾಜಿಯನ್ನು ನೋಡಿ) ಏನೋ ಜೋಗೀ, ತಲೆಯೆಲ್ಲ ಹರಟುವೆ? ಯಾರೋ ದುಷ್ಟ? ಯಾರೋ ಭ್ರಷ್ಟ? ಯಾರೋ ಪಾಪಿಷ್ಠ? ಸಾಧುವೆಂದು ಬಗುಳಿಕೊಳ್ಳುತ್ತಿರುವೆ! ಹೀಗೆ ಕಂಡ ಕಂಡವರಮೇಲೆ ಬೀಳಲು ಬರುವೆ! ನೀನೆಂತಹ ಸಾಧುವೋ? ಅಯೋಗ್ಯಾ! ಹೀಗೆ ಹುಚ್ಚುಹುಚ್ಚಾಗಿ ಹರಟದೆ, ನಾಲಿಗೆ ಬಿಗಿ ಹಿಡಿದು, ಬಾಯಿಗೆ ಬೀಗಹಾಕಿ, ಕಾಲಿಗೆ ಬುದ್ಧಿಹೇಳು, ಇಲ್ಲವಾದರೆ ಅನರ್ಥವಾದೀತು.

**ತುಕಾರಾಮ**—(೯) (ಕೈಮುಗಿದು) ಪೂಜ್ಯರೇ, ಸಾಧುಗಳಾದ ತಮಗೆ ಕೋಪತಾಪಗಳೇ ಇರತಕ್ಕುದಲ್ಲವಲ್ಲಾ! ಖೇದ ಮೋದ ಗಳನ್ನು ಸಮಾನವಾಗಿ ಎಣಿಸಬೇಕಾದ ತಾವು ಈ ರೀತಿ ಕುಪಿತರಾಗ ಬಹುದೇ! ನನ್ನದೇನಾದರೂ ಅಪರಾಧವಿದ್ದರೆ ದಯವಿಟ್ಟು ಕ್ಷಮಿಸಿ. (ಕಾಲನ್ನು ಹಿಡಿದುಕೊಳ್ಳುವನು.)

**ಮಂಬಾಜಿ**—(ಒದೆದು ನೂಕಿ) ಛೀ! ಪಾಪೀ! ದೂರ ನಡೆ, ನನ್ನನ್ನು ಮುಟ್ಟಬೇಡ, ನೀನು ಮಹಾ ಪಾಪಿಯು, ಪತಿತನು.

**ಜಿಜಾಬಾಯಿ**—(ಮಂಬಾಜಿಯನ್ನು ನೋಡಿ) ಎಲವೋ ನೀಚಾ! ನನ್ನ ಪತಿ ಯನ್ನು ಪತಿತನೆಂದು ಒದೆದ ನೀನೇ ಪತಿತನು; ಅಯ್ಯೋ ಪಾಪಿ! ನಿನ್ನ ಕಾಲನ್ನು ಮುರಿದೇ ಬಿಡುವೆನು. ಆದುದಾಗಲಿ; (ಮೂಲೆ ಯಲ್ಲಿದ್ದ ಒನಕೆಯನ್ನು ತಂದೆತ್ತುವಳು.)

**ತುಕಾರಾಮ**—(ಕೈಹಿಡಿದು ನಿಲ್ಲಿಸಿ) ಎಲೆ! ಎಲೆ! ಸ್ವಲ್ಪ ನಿಲ್ಲು, ದುಡುಕ ಬೇಡ, ಶಾಂತಳಾಗು.

**ಜಿಜಾಬಾಯಿ**—ನಿಮ್ಮ ಶಾಂತತೆಗೆ ಬೆಂಕಿಹಾಕಿದರು. ಕಾಲಿನಿಂದ ಒದೆಯಿಸಿಕೊಂಡರೂ ನಾಚಿಕೆಯಿಲ್ಲದೆ ಕೋಣನಂತೆ ಸುಮ್ಮನೆ ಇದ್ದು

"ಶಾಂತ, ಶಾಂತ," ಎಂದು ಚೆಚ್ಚಿಕೊಳ್ಳುತ್ತಿರುವಿರಲ್ಲಾ ! ಇಷ್ಟು ಅವಮಾನ ಮಾಡಿದರೂ ನಿಮಗೆ ಕೋಪವೇ ಇಲ್ಲವಲ್ಲಾ !

**ತುಕಾರಾಮ**—ಕೋಪವೇಕೆ? ತನುಮನಗಳನ್ನು ನಿರ್ಮಲಮಾಡಿಕೊಂಡು ಅಭಿಮಾನರಹಿತನಾಗಿರುವನಿಗೆ ಕೋಪವೆಲ್ಲಿ ಬರುವುದು! ಇಂತಹ ಸತ್ಪುರುಷರ ಪಾದತಾಡನದಿಂದ ನಾನು ಪವಿತ್ರನಾದೆನು. (ಕೈಮುಗಿದು) ಪೂಜ್ಯರೇ, ನಮ್ಮ ಅಪರಾಧವನ್ನು ಕ್ಷಮಿಸಬೇಕು.

**ಮಂಬಾಜಿ**—ನಿನ್ನ ವಿಷಯದಲ್ಲಿ ಕ್ಷಮೆಯೇ? ದ್ರೋಹೀ! ನೀನು ಮಾಡಿರುವ ಸಾಧುದೂಷಣೆಗೂ, ಅವಮಾನಕ್ಕೂ ನಿನಗೆ ಯಾವ ಶಿಕ್ಷೆ ಮಾಡಿದರೆ ತಾನೆ ಸಾಕಾದೀತು! ಕುಲಗೇಡಿ, ಮಾನಹೀನ, ಅಲ್ಪ, ಅಯೋಗ್ಯ, ಇಂತಹ ನೀಚನಾದ ನೀನು ಕವಿತ್ವವನ್ನು ಬೇರೆ ಮಾಡುತ್ತಿರುವೆಯಲ್ಲವೇ? ಕವಿತ್ವವನ್ನು?

**ಜಿಜಾಬಾಯಿ**—ಅಹುದೋ ! ಅಹುದು ! ಕವಿತ್ವವನ್ನು ಮಾಡುತ್ತೇವೆ. ಅದರಿಂದ ನಿಮ್ಮಪ್ಪನ ಮನೆಯ ಗಂಟೇನು ಹೋಯಿತು?

**ಮಂಬಾಜಿ**—ಎಲವೋ ತುಕ್ಕಾ ! ಈಕೆ ನಾಲಿಗೆ ಬಿಗಿಹಿಡಿಯದೆ ಹರಟುತ್ತಿರುವಳಲ್ಲಾ ! ಅಯೋಗ್ಯನಾದ ನಿನಗೆ ಯಾವನೋ ಕವಿತೆಯನ್ನು ಕಲಿಸಿಕೊಟ್ಟವನು?

**ಜಿಜಾಬಾಯಿ**—ಅದೆಲ್ಲವೂ ನಿನಗೇತಕ್ಕೋ? ಬಂದ ದಾರಿ ಹಿಡಿದು ಹೋಗುವುದನ್ನು ಬಿಟ್ಟು?

**ತುಕಾರಾಮ**—ಸ್ವಾಮಿ! ಆ ಕವಿತಾಶಕ್ತಿಯನ್ನೂ ವಾಗ್ಝರಿಯನ್ನೂ ಆ ಪಾಂಡುರಂಗನೇ ನನಗೆ ಅನುಗ್ರಹಿಸಿದವನು, ಆ ಪರಮಾತ್ಮನ ಕೃಪೆಯಿಂದಲ್ಲದೆ ಕವಿತಾಶಕ್ತಿಯು ಲಭಿಸುವುದೆಂದರೇನು?

**ಮಂಬಾಜಿ**—ಓಹೋ ! ಹೋ ! ಏನು ಬಹು ವೇದಾಂತವನ್ನೊದರುವೆ? ನನ್ನೆದುರಲ್ಲಿ ನಿನ್ನ ಕವಿತಾಪ್ರಶಂಸೆಯೇನೋ ಠಕ್ಕಾ?

**ಜಿಜಾಬಾಯಿ**—ಎಲವೋ, ನೀನಲ್ಲದೆ ಮತ್ತೆ ಯಾರೂ ಕವಿತ್ವಮಾಡಬಾರದೆಂದು ಸಿದ್ಧಾಂತಮಾಡಿದ ಕತ್ತೆ ಯಾವುದೋ ಹುಚ್ಚಾ?

**ಮಂಬಾಜಿ**—ಎಲೆ ಗಂಡುಬೀರಿ ಹೆಂಗಸೇ! ನಿನ್ನ ಹರಟೆಗಳು ಬಲವಾದವು; ಇನ್ನೇನಾದರೂ ಅತಿಯಾಗಿ ಬಗುಳಿದರೆ ನಿನ್ನ ನಾಲಿಗೆಯುನ್ನು ಸೀಳಿಬಿಡುವೆನು.

**ಜಿಜಾಬಾಯಿ**—ನಾನು ನಿನ್ನ ಮೂಗನ್ನು ಕೊಯ್ದುಬಿಡುವೆನು.

**ತುಕಾರಾಮ**—ಏತಕ್ಕೆ ಹೀಗೆ ಕಂಠಶೋಷಣ ಮಾಡಿಕೊಳ್ಳುವಿರಿ? ಪಾಂಡುರಂಗನ ಕೃಪೆಯೊಂದಿದ್ದರೆ ಯಾರಃ ಯಾರನ್ನೂ ಏನೂ ಮಾಡಲಾರರು. (**ಜಿಜಾಬಾಯಿಯನ್ನು ನೋಡಿ**) ಎಲೌ! ಸಾಕು, ಯಾರು ಏನೆಂದರೆ ನಮಗದರಿಂದ ಕುಂದೇನು! ಸುಮ್ಮನಿರು ಪಾಂಡುರಂಗನು ಎಲ್ಲರನ್ನೂ ರಕ್ಷಿಸುವನು.

**ಮಂಬಾಜಿ**—(**ಕೋಪದಿಂದ**) ಹೀಗೆ ಅವಿವೇಕದಿಂದ ಹರಟೆ, ಮಹಾನುಭಾವನಾದ ಈ ಮಂಬಾಜೀ, ಸಾಧುಮಹಾರಾಜನಿಗವಮಾನಮಾಡಲು ಯತ್ನಿಸಿರುವ ನಿಮ್ಮನ್ನು ಪಾಂಡುರಂಗನು ರಕ್ಷಿಸುವನೋ? ಪಾಂಡುರಂಗನು? ಅದು ಹೇಗೆ ರಕ್ಷಿಸುವನೋ ನಾನು ನೋಡುವೆನು. ಈಗಲೇ ಧೂರ್ತನಾದ ನಿನ್ನನ್ನು ಹಿಡಿದು ಕೈಕಾಲ್ಗಳನ್ನು ಬಿಗಿದು ಗ್ರಾಮಾಧಿಕಾರಿಯ ಬಳಿಗೆಳೆದುಕೊಂಡುಹೋಗಿ ನಿನಗೆ ತಕ್ಕುದನ್ನು ಮಾಡಿಸುವೆನು. ಎಲೈ ಶಿಷ್ಯರಿರಾ, ಹಿಡಿಯಿರಿ ಇವನನ್ನು.

**ಜಿಜಾಬಾಯಿ**—ಎಲವೋ! ದುರಹಂಕಾರೀ! ನೀನು ಆತನನ್ನು ಹಿಡಿದು ಕಟ್ಟಿದರೆ ನನ್ನ ಕೈಗಳೇನು ಕಡಲೆ ಬುರುಗನ್ನು ತಿನ್ನುತ್ತಿರುವುವೋ! ನಾನೇ ನಿಮ್ಮೆಲ್ಲರನ್ನೂ ಹಗ್ಗದಿಂದ ಬಿಗಿದು ಗ್ರಾಮಾಧಿಕಾರಿಯ ಅಪ್ಪನ ಬಳಿಗೆ ಎಳೆದುಕೊಂಡು ಹೋಗುವೆನು. (**ಮಕ್ಕಳನ್ನು ನೋಡಿ**) ಎಲೆ ಕಾಶೀ, ಮಹಾದೇವಾ! ಎಲ್ಲಿ! ಹಗ್ಗವೆಲ್ಲಿ? (**ನೋಡಿ**) ಒಳಗೆ ಹೋಗಿ ಸೇದುವ ಹಗ್ಗವನ್ನು ತಂದು ನಿಮಗೆ ತಕ್ಕುದನ್ನು ಮಾಡುವೆನು. (**ಒಳಗೆ ಹೋಗುವಳು.**)

**ತುಕಾರಾಮ**—ಪೂಜ್ಯರೇ! ದೈವಕೃಪೆಯೊಂದಿರುವುದಾದರೆ ಯಾರು ಯಾರನ್ನು ದೂಷಿಸಿದರೂ, ಹೆದರಿಸಿದರೂ, ಬಾಧಿಸಿದರೂ, ಏನೂ ಆಗಲಾರದು.

**ಭಾ॥** ಜನಕ ತನ್ನನು ಬಾಧಿಸಲು ಹರಿ।
ಯನೆ ನೆನೆದ ಪ್ರಹ್ಲಾದನಿಗೆ ಕುಂ।
ದಿನಿತು ಬಂದುದೆ ಹರಿಯ ಭಜಿಸಿದ ಧ್ರುವಕುಮಾರನಿಗೆ ||
ಜನನಿಯಿಂ ಕೆಡುಕಾಯ್ತೆ? ಹರಿಪದ।
ವನಜಗಳ ಭಜಿಪರಿಗೆ ಗಳಪುವ।
ಮನುಜರಿಂ ಭಯವೆತ್ತಣದು ನಿರುಕಿಸಿರಿ ತತ್ತ್ವವನು ||೭||

ತತ್ತ್ವವೇದಿಗಳಾದ ತಾವೇತಕ್ಕೆ ಅಷ್ಟು ದೂರ ದುಡುಕಿ ಆಗ್ರಹ ಮಾಡಬೇಕು? ಸತ್ಪುರುಷರನ್ನು ದೂಷಿಸುವವರಿಗೆ ನರಕವು ಸಿದ್ಧವಾಗಿಯೇ ಇರುವುದು! ಇದನ್ನು ತಾವು ತಿಳಿಯದವ ರಲ್ಲವಷ್ಟೆ!

**ಮಂಬಾಜಿ**—ಎಲವೋ! ಕುಹಕೀ, ಕೇಳು, ನಾನು ಕರ್ಮದಲ್ಲಿ ಶಿಷ್ಟನು; ಆಚಾರದಲ್ಲಿ ವರಿಷ್ಠನು, ಸಾಧುಶ್ರೇಷ್ಠನು. ಶಾಪಾ ನುಗ್ರಹ ಶಕ್ತನೆನಿಸಿದ ಮಹಾ ತಪಸ್ವಿಯಾದ ನನಗೆ, ನನಗೆ ನರಕದ ಭೀತಿಯನ್ನು ತೋರಿಸುವೆಯಾ? ನಿನ್ನ ಕುತ್ಸಿತ ವಾಕ್ಯಗಳು ನನ ಗರ್ಥವಾಗಲಿಲ್ಲವೆಂದರಿತೆಯೋ? ಮಹಾ ವಿರಕ್ತನೂ ಶಕ್ತನೂ, ದೈವ ಭಕ್ತನೂ ಪಾಪವಿಮುಕ್ತನೂ ಆದ ನಾನು ಎಂತಹ ಮಹಾ ಪುರುಷ ನೆಂಬುದನ್ನು ತಿಳಿಯೆಯೋ? ಈ ಮಂಬಾಜಿ ಸಾಧು ಮಹಾರಾಜನು ಜಗದ್ವಿಖ್ಯಾತ ಪ್ರತಾಪವಂತನೂ, ತೇಜೋವಂತನೂ, ಧೀಮಂತನೂ ಕ್ರಿಯಾವಂತನೂ ಎಂಬುದನ್ನು ನೀನು ಕೇಳಿಲ್ಲವೋ? ನನ್ನ ಮಹಿಮೆ ಇನ್ನೂ ನಿನ್ನ ಗೋಚರಕ್ಕೆ ಬಂದಂತೆಯಿಲ್ಲ. ಅದನ್ನೀಗ ತೋರಿಸು ವೆನು. ನನಗೆ ನರಕದ ಭೀತಿಯನ್ನು ತೋರಿಸಿದ ನಿನಗೆ, ಆಂಜನೇಯನ ಕೃಪಾಕಟಾಕ್ಷದಿಂದ ಘೋರ ಶಾಪವನ್ನು ಕೊಟ್ಟು ಸುಟ್ಟು ಭಸ್ಮ ಮಾಡಿ, ನಿನ್ನನ್ನು ರೌರವ ನರಕಕ್ಕೆ ಕಳುಹಿಸುವೆನು. (**ಶಿಷ್ಯರನ್ನು ನೋಡಿ**) ಎಲೈ, ಇರಲಿ, ನಡೆಯಿರಿ, ಹೋಗುವ. (**ಹೋಗುವರು.**)

**ಜಿಜಾಬಾಯಿ**—(**ಹಗ್ಗವನ್ನು ಹಿಡಿದಾತುರದಿಂದೋಡಿಬಂದು**) ಎಲ್ಲಿ? ಎಲ್ಲಿ? ಆ ರಾವಣ ಸನ್ಯಾಸಿಯೆಲ್ಲಿ?

**ತುಕಾರಾಮ**—(ಹಿಡಿದು ನಿಲ್ಲಿಸಿ) ಎಲೆ, ಎಲೆ, ಇದೆಂತಹ ಕೆಲಸವೇ? ನಿನಗೇನು ಪಿಶಾಚವು ಹಿಡಿಯಿತೋ ಹೇಗೆ?

**ಜಿಜಾಬಾಯಿ**—ನನಗೆ ಪಿಶಾಚ ಹಿಡಿಯಿತೇ? ನಮ್ಮ ಮನೆಗೆ ಆ ನೀಚನು ಪಿಶಾಚ ಸ್ವರೂಪನಾಗಿ ಬಂದಿದ್ದನು. ಆ ಧೂರ್ತನು! ಅಯೋಗ್ಯನು, ಕಪಟ ಸನ್ಯಾಸಿ, ಬೇಗನೆ ಹೊರಟುಹೋಗಿ ಬದುಕಿದನು. ಇಲ್ಲದೆ ನನ್ನ ಕೈಗೆ ಸಿಕ್ಕಿದ್ದಲ್ಲಿ ಅವನನ್ನು ಹಿಡಿದು ಕಟ್ಟಿ ಉಸಿರಡಗುವವರೆಗೂ ಬಡಿದು ಬಾರಿಸಿಬಿಡುತ್ತಿದ್ದೆನು.

**ತುಕಾರಾಮ**—ಹೀಗೆ ಮಾತನಾಡಬಾರದು. ಇದರಿಂದ ವೃಥಾ ಕಂಠಶೋಷಣವಲ್ಲದೆ ಯಾವ ಫಲವೂ ಇಲ್ಲ. ಸತ್ಪುರುಷರನ್ನು ದೂಷಿಸಬಾರದು. ಅವರ ಸಂತಾಪವು ನಮಗೆ ಪರಿತಾಪವನ್ನುಂಟುಮಾಡಿ ಇಹಪರ ಸುಖಗಳೆರಡನ್ನೂ ಕೆಡಿಸುವುದು. ದೇವರು ತನ್ನ ಭಕ್ತರನ್ನು ನೋಯಿಸಿದವರಿಗೆ ಎಂದಿಗೂ ಶ್ರೇಯಸ್ಸನ್ನುಂಟುಮಾಡಲಾರನು. ದೈವ ದ್ರೋಹಕ್ಕಿಂತಲೂ ದೈವ ಭಕ್ತರಿಗೆ ಮಾಡಿದ ದ್ರೋಹವು ಪ್ರಬಲ ಪಾಪಕರವು. ಆದುದರಿಂದ ನಾವು ನಮ್ಮ ಸರ್ವಾಪರಾಧಗಳನ್ನೂ ಮನ್ನಿಸುವಂತೆ ಆ ಶ್ರೀಹರಿಯನ್ನು ಭಜಿಸಿ ಪ್ರಾರ್ಥಿಸೋಣ.

**ಜಿಜಾಬಾಯಿ**—ಸರಿ! ನಿಮ್ಮ ವೇದಾಂತಕ್ಕೂ ಹರಿ ಭಜನೆಗೂ ತುದಿ ಮೊದಲೇ ಇಲ್ಲ. ಹೀಗೆ ಸದಾ ಹರಿ ಭಜನೆ ಮಾಡುತ್ತಿದ್ದರೆ ಹೊಟ್ಟೆ ತುಂಬುವುದೇ? ನನಗಾದರೋ ಹೊಟ್ಟೆ ಹಸಿದು ಪ್ರಾಣ ಹೋಗುತ್ತಿರುವುದು. ಮಕ್ಕಳೂ ಹಸಿದು ಕಂಗೆಟ್ಟಿರುವರು. ಇದಕ್ಕೇನು ಮಾಡುವಿರಿ? ಅದನ್ನು ಮೊದಲು ಹೇಳಿ.

**ತುಕಾರಾಮ**—ಅಯ್ಯೋ! ಗೇಣುದ್ದದ ಹೊಟ್ಟೆಯನ್ನು ತುಂಬಿಕೊಳ್ಳುವುದು ಎಷ್ಟು ಕಷ್ಟ!! ನಮಗೆ ಅದರ ವಿಚಾರವೇ ಪ್ರಬಲವಾಯಿತಲ್ಲಾ! ಮಗೂ, ಮಹಾದೇವಾ! ಬಾ, ನಾವು ಹೋಗಿ, ನಮ್ಮ ಜೀವನಕ್ಕೆ ಏನು ಆಧಾರವನ್ನು ಕಲ್ಪಿಸಿರುವೆಯೆಂದು ವೈಕುಂಠನಾಥನನ್ನು ಕೇಳೋಣ. **(ಹಾಡುತ್ತ ಹೊರಡುವನು.)**

**ಜಿಜಾಬಾಯಿ**—(ಓಡಿಬಂದು ಅಡ್ಡಗಟ್ಟಿ) ನಿಲ್ಲಿ; ಎಲ್ಲಿಗೆ ಹೋಗುವಿರಿ? ಹೆಂಡತಿ ಮಕ್ಕಳನ್ನು ಕಾಪಾಡಲಿಷ್ಟವಿಲ್ಲದೆ ಇದ್ದಿದ್ದರೆ ನೀವು ಮೊದುವೆಯನ್ನೇತಕ್ಕೆ ಮಾಡಿಕೊಳ್ಳಬೇಕಾಗಿತ್ತು? ಹೆಂಡತಿಯ ಕೊರಲಿಗೆ ಮಾಂಗಲ್ಯವನ್ನು ಕಟ್ಟಿದ ಕ್ಷಣದಲ್ಲಿಯೇ ನಿಮ್ಮ ಕೊರಲಿಗೆ ಸಂಸಾರವನ್ನು ಕಟ್ಟಿಕೊಂಡಿರೆಂಬುದು ನಿಮಗೆ ಗೊತ್ತಿಲ್ಲವೇನೋ! ಪಾಪ! ಮಹಾ ಸಾಧುಗಳೂ ಭೂತದಯಾಪರರೂ ಎಂದು ಎಲ್ಲರಿಂದಲೂ ಹೊಗಳಿಸಿಕೊಳ್ಳುವ ನೀವು ನಿಮ್ಮ ಹೆಂಡತಿ ಮಕ್ಕಳು ತಿಂಡಿಗೆ ಮಾರ್ಗವಿಲ್ಲದೆ ಸಾಯುತ್ತಿದ್ದರೂ 'ವಿಠಲ ವಿಠಲ ವಿಠಲ' ಎಂದು ಮೂರು ಹೊತ್ತೂ ಆ ಹಾಳು ವಿಠಲನಿಗಾಗಿ ಶಂಖವಾದ್ಯ ಮಾಡುತ್ತಿರುವಿರಲ್ಲಾ! ಇದೇನೋ ನಿಮ್ಮ ಸಾಧುತನ? ಕಡೆಗೂ ಈಗಲೂ ಹೋಗಿ ವೈಕುಂಠನಾಥನನ್ನು ಕೇಳುವೆನೆಂದು ಹೊರಟುಬಿಟ್ಟಿರಲ್ಲಾ! ಇದಾಗಬಹುದೋ?

**ತುಕಾರಾಮ**—ಹಾಗಾದರೆ ವೈಕುಂಠನಾಥನಿಗಲ್ಲದೆ ನಮ್ಮ ಕಷ್ಟವನ್ನು ಯಾರಿಗೆ ಹೇಳಿಕೊಳ್ಳಬೇಕು?

**ಜಿಜಾಬಾಯಿ**—ವೈಕುಂಠನಾಥನಿಗೆ ಹೇಳಿಕೊಳ್ಳಬೇಕೋ? ಹಾಗಾದರೆ ನಾನೇ ನಿಮ್ಮನ್ನೀ ಕಂಬಕ್ಕೆ ಬಿಗಿದು ವೈಕುಂಠವನ್ನು ತೋರಿಸುವೆನು.

**ತುಕಾರಾಮ**—ಪಾಂಡುರಂಗನ ಇಷ್ಟವಿದ್ದರೆ ಅದೂ ಆಗಲಿ.

**ಜಿಜಾಬಾಯಿ**—ಪಾಂಡುರಂಗನ ಇಷ್ಟವೆಂತಹುದು? ನನ್ನ ಇಷ್ಟ!

**ತುಕಾರಾಮ**—ನಿಜ, ನಿನ್ನ ಇಷ್ಟವೇ ಆಗಲಿ. ನೀನೇ ಆ ಪಾಂಡುರಂಗ ಸ್ವರೂಪಿಣಿಯೆಂದು ಭಾವಿಸುವೆನು.

**ಜಿಜಾಬಾಯಿ**—(ಹಣೆಯನ್ನು ಚಚ್ಚಿಕೊಳ್ಳುತ್ತಾ) ಹೀಗೆ ಮೊಂಡುತನದ ಉತ್ತರಗಳನ್ನು ಹೇಳುವ ಈ ಗಂಡನೊಡನೆ ಬೇಯುವುದಕ್ಕಿಂತಲೂ ಈ ಸಂಸಾರಕ್ಕೇ ತಿಲತರ್ಪಣವನ್ನು ಬಿಟ್ಟು ಎಲ್ಲಿಯಾದರೂ ಹಾಳಾಗಿ ಹೋಗಬೇಕು.

**ತುಕಾರಾಮ**—ನಿಜವಾದ ಮಾತನ್ನೇ ಹೇಳಿದೆ! ಸಂಸಾರಕ್ಕೆ ತಿಲತರ್ಪಣವನ್ನು ಬಿಟ್ಟು ವೈಕುಂಠಕ್ಕೆ ಹೋಗಬೇಕಾದ ಗಮನವೇ ನಮಗಿರ

ಬೇಕಾದುದು. ಅದರಿಂದ ನಾನು ಹೊರಡುವೆನು. (ವೇಗವಾಗಿ ಹೊರಟು ಹೋಗುವನು.)

**ಜಿಜಾಬಾಯಿ**— ಕಾಶೀ! ಮಹಾದೇವಾ! ಓಡಿ! ನಿಮ್ಮ ತಂದೆಯು ಹೊರಟೇ ಹೋದರು. ಓಡಿಹೋಗಿ ಹಿಡಿದು ಕರೆತನ್ನಿ.

**ಕಾಶಿ, ಮಹಾದೇವ**—(ಹೋಗಿ ನೋಡಿ ಹಿಂದಿರುಗಿ ಬಂದು) ಅವ್ವಾ! ಅಪ್ಪನಾಗಲೇ ಬಹಳ ದೂರ ಹೊರಟುಹೋದನವ್ವಾ! ನಮ್ಮ ಕಣ್ಣಿಗೆ ಕಾಣಿಸದಂತೆ ಹೊರಟುಹೋಗಿರುವನು.

**ಜಿಜಾಬಾಯಿ**—ಅಯ್ಯೋ! ಇನ್ನೇನು ಮಾಡಲಿ! ಕೋಪಿಸಿಕೊಂಡು ಹೊರಟೇ ಹೋದರಲ್ಲಾ! ಗಂಡಸಿಲ್ಲದ ಮನೆಯಲ್ಲಿ ಇದ್ದು ಸಂಸಾರ ಮಾಡುವುದು ಹೇಗೆ? ಏನು ಮಾಡಲಿ! (ಚಿಂತಿಸಿ ಕಣ್ಣೀರನ್ನು ಒರಸಿಕೊಳ್ಳುತ್ತ) ಇರಲಿ, ನಾನೇ ಹುಡುಕಿಕೊಂಡು ಹೋಗಿ, ಮನೆಗೆ ಬರಬೇಕೆಂದು ಪ್ರಾರ್ಥಿಸಿ ಕರೆತರುವೆನು. (ಹೋಗುವರು.)

## ದೃಶ್ಯ ೪—ದೇವಪುರದ ಬೀದಿ

(ತುಕಾರಾಮನು ವಿಠಲಭಜನೆ ಮಾಡುತ್ತ ಪ್ರವೇಶಿಸುವನು.) (೧೦)

**ತುಕಾರಾಮ**—ಆಹಾ! ಪಾಂಡುರಂಗಾ! ನಿನ್ನ ಭಕ್ತರನ್ನು ನೀನು ಎಷ್ಟು ವಿಧಗಳಲ್ಲಿ ಪರೀಕ್ಷಿಸುವೆ! ಅವರಿಗೆ ಎಷ್ಟು ವಿಧವಾಗಿ ಕಷ್ಟಗಳನ್ನು ಕೊಡುತ್ತಿರುವೆ? ಈ ಸಂಸಾರವೆಂಬ ಸೆರೆಗೆ ನನ್ನನ್ನು ಸಿಕ್ಕಿಸಿ, ನಾನಾ ವಿಧವಾದ ಹಿಂಸೆಗೆ ಗುರಿಮಾಡಿರುವೆಯಲ್ಲಾ! ಸಂಸಾರ ಸಾಗರ ತಾರಕನಾದ ನಿನಗೆ ನನ್ನಲ್ಲಿ ಇನ್ನೂ ಏತಕ್ಕೆ ಕೃಪೆಯುಂಟಾಗಲಿಲ್ಲ! ನಿನ್ನನ್ನೇ ನಂಬಿ ನಿರಂತರವೂ ನಿನ್ನ ಧ್ಯಾನದಲ್ಲಿಯೇ ಆಸಕ್ತನಾಗಿರುವ ನನ್ನನ್ನು ನೀನು ಕಟಾಕ್ಷಿಸಲಿಲ್ಲವಲ್ಲಾ! ಕರ್ಮವಿಶೇಷದಿಂದ ಆರ್ಜಿಸಿದ ಪಾಪಗಳ ಫಲರೂಪವಾದ ಈ ಸಂಸಾರವೆಂಬ ಮಹಾರೋಗವು ನಿನ್ನ ಧ್ಯಾನಾಮೃತೌಷಧದಿಂದ ಪರಿಹಾರವಾಗಬೇಕೆಂದು ಬಯಸಿ ಬೇಡುತ್ತಿರುವ ಈ ಭಕ್ತನನ್ನು ಭವರೋಗ ಭಿಷಜ್ಮಣಿಯಾದ

ನೀನು ಮರೆತುಬಿಟ್ಟೆಯಾ? ಅಥವಾ ಉದಾಸೀನಮಾಡಿದೆಯಾ? ಆಶ್ರಿತ ವತ್ಸಲನಾದ ನಿನಗೆ ನನ್ನ ಕಷ್ಟವು ಇನ್ನೂ ಗೋಚರವಾಗಲಿಲ್ಲವೇ?

**ಜಿಜಾಬಾಯಿ—(ಮಕ್ಕಳೊಡನೆ ಪ್ರವೇಶಿಸಿ ಕೈಮುಗಿದು)** (೧೧) ಸ್ವಾಮಿ, ನನ್ನ ಅಪರಾಧವನ್ನು ಕ್ಷಮಿಸಬೇಕು. ಸಂಸಾರದ ಕಷ್ಟಗಳನ್ನು ಅನುಭವಿಸಲಾರದೆ ನಾನು ಆಡಿದ ಮಾತುಗಳಿಗೆ ನೀವು ಹೀಗೆ ಕೋಪ ಮಾಡಿಕೊಂಡು ಬಂದರೆ ನಿಮ್ಮನ್ನು ನಂಬಿದ ನಮ್ಮ ಗತಿಯೇನು? ಕಷ್ಟ ಸುಖಗಳಲ್ಲಿ ಕೈಹಿಡಿದು ಕಾಪಾಡಬೇಕೆಂದು ನಿಮ್ಮನ್ನೆ ಆಶ್ರಯಿಸಿರುವ ಈ ಧರ್ಮಪತ್ನಿಯನ್ನೂ ಮಕ್ಕಳನ್ನೂ ಅನಾಥರನ್ನಾಗಿ ಮಾಡಿ ಹೀಗೆ ಹೋಗಬೇಡಿ; ನಿಮ್ಮಮೇಲೆ ನಾನು ಕೋಪಮಾಡಿಕೊಳ್ಳುವುದಿಲ್ಲ. ದಯೆಯಿಟ್ಟು ನನ್ನೊಡನೆ ಮನೆಗೆ ಬನ್ನಿ.

**ತುಕಾರಾಮ**—ಎಲೌ, ಮನೆ ಯಾರಿಗೆ ಬೇಕು! ಮಡದಿ ಯಾರಿಗೆ ಬೇಕು! ಮಕ್ಕಳಾರಿಗೆ ಬೇಕು!! ಈ ಸಂಸಾರವು ಯಾರಿಗೆ ಬೇಕು! ಮನುಷ್ಯನು ತನ್ನ ಸಕಲೇಂದ್ರಿಯಗಳನ್ನೂ ಪರಮಾತ್ಮನ ಸೇವೆಗೂ ಚಿತ್ತವನ್ನು ಆತನ ಧ್ಯಾನಕ್ಕೂ ಉಪಯೋಗಿಸಿ ಸ್ಥಿರವಾದ ನಿತ್ಯಾನಂದ ಪದವಿಯನ್ನಾರ್ಜಿಸುವುದನ್ನು ಬಿಟ್ಟು, ಈ ನಶ್ವರವಾದ ಹಾಳು ಸಂಸಾರ ಬಂಧನಕ್ಕೆ ಸಿಕ್ಕಿಕೊಂಡು ಹೆಣಗಾಡುವುದರಿಂದ ಫಲವೇನು? ನಾನು ಇನ್ನು ಮುಂದೆ ಸಂಸಾರದ ಸಕಲ ಚಿಂತೆಗಳನ್ನೂ ಬಿಟ್ಟು ಸದಾ ವಿಠಲನ ಸೇವೆ ಮಾಡಿ ಆ ಪರಮಾತ್ಮನ ಕೃಪೆಯನ್ನಾರ್ಜಿಸಲು ಸಂಕಲ್ಪಿಸಿರುವೆನು. ಆದುದರಿಂದ ಮತ್ತೆ ಸಂಸಾರ ಬಂಧನಕ್ಕೆ ಸಿಕ್ಕಲು ನನ್ನನ್ನು ನಿರ್ಬಂಧಿಸಬೇಡ.

**ಜಿಜಾಬಾಯಿ**—ಹಾಗಲ್ಲ, ದಯೆಯಿಟ್ಟು ನನ್ನ ಮಾತನ್ನು ಕೇಳಿ......

**ತುಕಾರಾಮ**—ಈವರೆಗೂ ನಿನ್ನ ಮಾತುಗಳನ್ನೆಷ್ಟೋ ಕೇಳಿದೆನು. ಇನ್ನು ವಿಠಲನ ನಾಮವನ್ನೂ ಆತನ ಚರಿತ್ರೆಯನ್ನೂ ಮಹಿಮೆಗಳನ್ನೂ ಅಲ್ಲದೆ ಇನ್ನು ಯಾವುದನ್ನೂ ನಾನು ಕಿವಿಯಿಂದ ಕೇಳಲೊಲ್ಲೆನು.

**ಮಹಾದೇವ-ಕಾಶಿ**—ಅಪ್ಪಾ! ಅಮ್ಮನ ಮಾತು ಹಾಗಿರಲಿ, ಮಕ್ಕಳಾದ ನಮ್ಮನ್ನು ನೀನು ನೋಡಬೇಡವೋ?

**ತುಕಾರಾಮ**—ನಿಮ್ಮನ್ನು ಈವರೆಗೂ ಎಷ್ಟೋ ನೋಡಿದುದಾಯಿತು. ಇನ್ನು ನಮ್ಮ ವಿಠಲನನ್ನು ನೋಡೋಣ. ವಿಠಲನ ಸುಗುಣಗಳನ್ನು ಪಾಡೋಣ. ಆತನ ಕೀರ್ತನವನ್ನು ಮಾಡೋಣ. ಆತನ ಮಹಿಮೆಗಳನ್ನು ಕೇಳೋಣ.

**ಜಿಜಾಬಾಯಿ**—(ವಿನಯದಿಂದ) ಹಾಗಾದರೆ ನಾನೂ ನಿಮ್ಮಂತೆ ವಿಠಲನ ಧ್ಯಾನಮಾಡುತ್ತೇನೆ. ನೀವು ಹೇಳಿದಂತೆ ಕೇಳುತ್ತೇನೆ. ಇನ್ನಾದರೂ ನೀವು ಮನೆಗೆ ಬಂದು ಸಂಸಾರದಲ್ಲಿ ಸಂತೋಷವಾಗಿರಿ.

**ತುಕಾರಾಮ**—ಎಲೌ, ನಾನು ವಿಠಲನ ದಾಸನು; ಸಂಸಾರವು ನನಗೆ ಬೇಕಿಲ್ಲ, ನನ್ನನ್ನು ನಿರ್ಬಂಧಿಸಬೇಡ.

**ಜಿಜಾಬಾಯಿ**—(ವ್ಯಸನದಿಂದ) ಅಯ್ಯೋ! ಬಂಗಾರದಂತಹ ಸಂಸಾರದ ಮೇಲೆ ನಿಮಗೆ ಮಮತೆಯೇ ಇಲ್ಲವಲ್ಲಾ!

**ತುಕಾರಾಮ**—ಮಮತೆಯಿಲ್ಲದಿದ್ದರೆ ಕುಂದಕವೇನು?

**ಜಿಜಾಬಾಯಿ**—ಮಮತೆಯಿಲ್ಲದಿದ್ದರೆ ಹೆಂಡತಿ ಮಕ್ಕಳು ಬದುಕುವುದೆಂದರೇನು?

**ತುಕಾರಾಮ**—ಅವರು ಬದುಕದಿದ್ದರೆ ಆಗುವ ನಷ್ಟವೇನು?

**ಜಿಜಾಬಾಯಿ**—(ಕಿವಿಗಳನ್ನು ಮುಚ್ಚಿ) ಅಯ್ಯೋ! ಮಂಗಳಾದೇವೀ! ಬದುಕಿರುವಾಗಲೇ ನಿಮ್ಮ ಹೆಂಡತಿ ಮಕ್ಕಳಿಗೆ ಅಮಂಗಳವನ್ನು ನುಡಿಯುತ್ತಿರುವಿರಲ್ಲಾ!

**ತುಕಾರಾಮ**—ಅಯ್ಯೋ! ಹುಚ್ಚು ಹೆಂಗಸೇ!

|| ಸೀಸಪದ್ಯ ||

**ಕಸದ ರಾಶಿಯ ಮೇಲೆ ಕಣ್ಮುಚ್ಚಿ ಮಲಗಿರುತ ಕನಸಿನೊಳಗರಸಾಗಿ ಕನವರಿಸುತ |**
**ನಲಿವಂತೆ ಪಾಪಗಳ ನೆಲೆಯಾದ ಸಂಸಾರದೊಳು ಸಿಲುಕಿ ವಿಭ್ರಾಂತಿಗೊಳಲದೇಕೆ ||**
**ಸಂತೆಗೆಲ್ಲರು ಸೇರಿ ಸಂಜೆಗಗಲುವ ತೆರದಿ ಸತಿಪುತ್ರಬಂಧುಜನ ಸಹಿತಮಾದ |**
**ಸಂಸಾರವಿದರೊಳಗೆ ಸಂಬಂಧವೇನಿಹುದು ಪರಮಾತ್ಮನೆಮ್ಮ ಕಾಪಾಡುತಿರಲು ||೮||**

ಗೀತ|| ಪರಮಾತ್ಮನನು ಕಾಣ್ಬ ಪಥವನುಳಿದು |
ಧರಣಿಯೊಳು ಭವಬಂಧನದೊಳು ಸಿಲುಕಿ ||
ಸ್ಮರಿಸದಾ ವಿಠ್ಠಲನ ಚರಣಯುಗವ |
ನರಳಲುಚಿತವೆ ಬಗೆಯೆ ನರರು ಜಗದಿ ||೯||

ಲೋಕದಲ್ಲಿ ಹೆಂಡತಿ ಯಾರು? ಮಕ್ಕಳು ಯಾರು? ಏನು ಕಥೆ?

**ಜಿಜಾಬಾಯಿ**—ಈಗ ಚೆನ್ನಾಯಿತು! ಶೃಂಗಾರಕ್ಕೆ ಬಳೆಯನ್ನು ತೊಟ್ಟು ಕೊಂಡು ಕೊಡಹಿದರೆ ಹೋಗುವುದೇ? "ಹೆಂಡತಿ ಯಾರು? ಮಕ್ಕಳು ಯಾರು?" ಎಂದು ಹೇಳುವಿರಲ್ಲಾ! ಹೆಂಡತಿಯು ನಾನು, ಮಕ್ಕಳು ಇವರು, ನಮ್ಮನ್ನು ಕಾಪಾಡುವವರು ನೀವು.

**ತುಕಾರಾಮ**—ನಮ್ಮೆಲ್ಲರನ್ನೂ ಕಾಪಾಡುವವನು ಪಾಂಡುರಂಗನು; ಹೀಗಿರುವಲ್ಲಿ ನಾನು ನಿಮ್ಮನ್ನು ಕಾಪಾಡುವುದೆಂದರೇನು?

**ಜಿಜಾಬಾಯಿ**—ಸಂಪಾದಿಸಲು ಶಕ್ತಿಯುಳ್ಳ ನೀವೇ ಉದಾಸೀನರಾಗಿರು ವಲ್ಲಿ ಗುಡಿಯಲ್ಲಿ ಗುಂಡುಕಲ್ಲಿನಂತೆ ಕುಳಿತಿರುವ ಪಾಂಡುರಂಗನು ನಮ್ಮನ್ನು ಕಾಪಾಡಿ ಬಿಡುವನೇ? ನೀವು ಪ್ರಯತ್ನ ಮಾಡಿ ನಮ್ಮನ್ನು ಕಾಪಾಡಬೇಕಲ್ಲದೆ ಮತ್ತೆ ಯಾರೂ ಕಾಪಾಡಲಾರರು.

**ತುಕಾರಾಮ**—ಹಾಗಾದರೆ ಈಗ ಯಾವ ಪ್ರಯತ್ನವನ್ನು ಮಾಡಬೇ ಕೆಂದು ನಿನ್ನ ಅಭಿಮತವು?

**ಜಿಜಾಬಾಯಿ**—ಮತ್ತೆ ಯಾವ ಪ್ರಯತ್ನವು! ಪೂರ್ವದಿಂದಲೂ ವಂಶ ಕ್ರಮಾಗತವಾಗಿರುವ ವ್ಯಾಪಾರವಲ್ಲವೇ ನಮ್ಮ ಜೀವನಾಧಾರ ವೃತ್ತಿಯು! ಅದನ್ನು ತಾನೇ ಮಾಡಬೇಕು!

**ತುಕಾರಾಮ**—ವ್ಯಾಪಾರ ಮಾಡಲು ಮೂಲ ಧನವು ಬೇಕಲ್ಲವೇ! ಹಣದ ಸುದ್ದಿಯೇ ನನ್ನಲ್ಲಿ ಶೂನ್ಯವಾಗಿರುವುದಲ್ಲಾ!

**ಜಿಜಾಬಾಯಿ**—ಹಾಗಾದರೆ, ನನ್ನ ತೌರುಮನೆಯಿಂದ ಸ್ವಲ್ಪ ಹಣವನ್ನು ತಂದಿರುವೆನು. ಅದನ್ನು ನಿಮ್ಮ ವಶಕ್ಕೆ ಕೊಡುವೆನು. ಅದನ್ನೇ

ಮೂಲಧನವಾಗಿಟ್ಟುಕೊಂಡು ಯಾವುದಾದರೂ ಸರಿಯಾದ ವ್ಯಾಪಾರ ವನ್ನು ಹೂಡಿದರೆ ತಾಪವಿಲ್ಲದೆ ಸಂಸಾರ ಮಾಡಬಹುದು.

**ತುಕಾರಾಮ**—ಓಹೋ! ಹಾಗಾದರೆ ನಿನ್ನಲ್ಲಿ ಹಣವಿರುವುದೇನು?

**ಜಿಜಾಬಾಯಿ**—ಇರುವುದು.

**ತುಕಾರಾಮ**—ಎಲ್ಲಿ? ಕೊಡು.

**ಜಿಜಾಬಾಯಿ**—(**ನಡುವಿನಿಂದ ಬಟ್ಟೆಯ ಗಂಟನ್ನು ತೆಗೆದು ಬಹಳ ಹೊತ್ತು ಬಚ್ಚಿ ಹಣವನ್ನು ಕೊಡುವಳು.**)

**ತುಕಾರಾಮ**—(**ಹಣವನ್ನು ತೆಗೆದುಕೊಂಡು**) ಸರಿ! ಇನ್ನು ನಾನು ಮನೆಗೆ ಬರುವೆನು. ನೀವು ಹೊರಡಿ.

**ಜಿಜಾಬಾಯಿ**—ನಿಜವಾಗಿಯೂ ಬರುವಿರಾ?

**ತುಕಾರಾಮ**—ನಿಜವಾಗಿಯೂ ಬರುವೆನು.

**ಜಿಜಾಬಾಯಿ**—ಬೇಗನೆ ಬರಬೇಕು. ಮಗೂ, ಮಹಾದೇವ, ಕಾಶಿ, ನಿಮ್ಮ ತಂದೆಯನ್ನು ಕರೆದುಕೊಂಡು ಬನ್ನಿ. (**ಜಿಜಾಬಾಯಿ ಹೋಗುವಳು.**)

**ತುಕಾರಾಮ**—ಅಯ್ಯೋ! ದೇವರೇ! ಎಂತಹ ವಿಚಿತ್ರ ಕಾರ್ಯಗಳನ್ನು ಮಾಡುತ್ತಿರುವೆ? ಎಂತಹ ವಿಲಕ್ಷಣ ಸಂಧಿಗಳನ್ನು ಕಲ್ಪಿಸಿ ನನ್ನನ್ನು ಪರೀಕ್ಷಿಸುತ್ತಿರುವೆ!

**ಭಾ॥** ಹಣವೆನಿಸುವ ಪಿಶಾಚವಿಳೆಯೊಳು।
ಕುಣಿಸಿ ನರನನು ವಿಧವಿಧದಿ ತನ।
ಗೆಣೆಯೆನಿಪರಿಲ್ಲೆಂಬ ದುರಹಂಕೃತಿಯ ಪುಟ್ಟಿಸುತ ||
ಗುಣವಿಹೀನನ ಮಾಡಿ ಮರೆಯಿಸಿ।
ಫಣಿಶಯನ ಭಜನೆಯನು ಷಡ್ರಿಪು।
ಗಣಕೆ ಸಿಲ್ಕಿಸಿ ಕೊಲ್ವುದರ್ಥಮನರ್ಥಮಕಟಕಟಾ ||೧೦||

ವಿಠಲಾ! ಸಂಸಾರ ಬಂಧನವನ್ನೇ ತೊಲಗಿಸಿಕೊಳ್ಳಬೇಕೆಂದು ಯತ್ನಿಸುತ್ತಿರುವ ನನ್ನ ಮನೆಗೆ ಈ ಹಣವೆಂಬ ಪಿಶಾಚವನ್ನು ಕಳುಹಿಸಿ

ನನ್ನನ್ನು ಅದರ ವಶಮಾಡಲು ಪ್ರಯತ್ನಿಸಿರುವೆಯಾ? ಆಹಾ! ಈಗ ನಾನು ಈ ಧನ ಪಿಶಾಚದ ವಶನಾದರೆ ದುಃಖಾಂಧಕಾರಮಯವಾದ ಅಗಾಧ ಸಂಸಾರ ಕೂಪಕ್ಕೆ ಬಿದ್ದು, ದುಃಖ ನಿವಾರಣೋಪಾಯ ವನ್ನು ಕಾಣದೆ ನರಳಬೇಕಾಗುವುದೇನೋ ನಿಜ! ಈಗ ನಾನೇನು ಮಾಡಲಿ! ( **ಆಲೋಚಿಸಿ, ಮುಂದೆ ನೋಡಿ ಸಂತೋಷದಿಂದ** ) ಓಹೋ! ಮುಂದೆ ಯಾರೋ ಬ್ರಾಹ್ಮಣೋತ್ತಮರು ಬರುತ್ತಿರುವರು. ಇದು ನನ್ನ ಪುಣ್ಯವೇ ಸರಿ! (**ಬ್ರಾಹ್ಮಣರು ಪ್ರವೇಶಿಸುವರು.**) **ಪೂಜ್ಯರೇ!** ತಮ್ಮ ದರ್ಶನದಿಂದ ಬಹಳ ಸಂತೋಷವಾಯಿತು! ತಾವು ಎಲ್ಲಿಗೆ ದಯಮಾಡಿಸುತ್ತಿರುವಿರಿ?

**ಬ್ರಾಹ್ಮಣರು**—ಅಯ್ಯಾ, ನಾವು ಕಾಶಿ, ಪ್ರಯಾಗ, ಹರಿದ್ವಾರಾದಿ ಕ್ಷೇತ್ರಗಳ ಯಾತ್ರೆಯನ್ನು ಮಾಡಿ ಮುಂದೆ ರಾಮೇಶ್ವರ ಯಾತ್ರೆ ಗಾಗಿ ಹೊರಟಿರುವೆವು. ಆದಕಾರಣ ಉದಾರಿಗಳಾದ **ಪುಣ್ಯ**ಶೀಲ ರಿದ್ದರೆ ಅವರಲ್ಲಿ ಧನ ಯಾಚನೆ ಮಾಡಿಕೊಂಡು ಮುಂದೆ ಪ್ರಯಾಣ ಮಾಡಬೇಕೆಂದು ಮಾರ್ಗವಶದಿಂದ ಈ ಊರಿಗೆ ಬಂದೆವು.

**ತುಕಾರಾಮ**—ಬಹಳ ಸಂತೋಷ! ಬಹಳ ಸಂತೋಷ! ಕಲಿಯುಗ ದಲ್ಲಿ ಪರಮಾತ್ಮನು ಸಾಧು ರೂಪದಲ್ಲಿಯೂ ವಿಪ್ರ ರೂಪದಲ್ಲಿಯೂ ಇರುವನೆಂದು ಕೇಳಿರುವೆನು. ಆದಕಾರಣ ಪರಮಾತ್ಮ ಸ್ವರೂಪ ರಾದ ತಮ್ಮ ಸೇವೆಯು ಲಭಿಸಿ ಧನ್ಯನಾದೆನು. ಇದೋ! ಈ ಧನ ವನ್ನು ದಯವಿಟ್ಟು ಪರಿಗ್ರಹಿಸಿ ನನ್ನನ್ನು ಕೃತಾರ್ಥನನ್ನಾಗಿ ಮಾಡ ಬೇಕು. (**ಹಣವನ್ನು ಕೊಟ್ಟು ನಮಸ್ಕರಿಸುವನು.**) (೧೨)

**ಬ್ರಾಹ್ಮಣರು**—(**ಆಶ್ಚರ್ಯದಿಂದ ಆತ್ಮಗಳ**) ಈತನೆಂತಹ ಉದಾರಿಯು!! (**ತುಕಾರಾಮನನ್ನು ನೋಡಿ**) ಅಯ್ಯಾ! **ಪುಣ್ಯ**ಶೀಲನೇ, ನೀನು ಪರಮ ಧಾರ್ಮಿಕನು! ನಿನ್ನ ಔದಾರ್ಯವನ್ನು ನೋಡಿ ನಮಗೆ ಬಹಳ ಸಂತೋಷವಾಯಿತು. ಪರಮಾತ್ಮನು ನಿನಗೆ ನಿತ್ಯ ಮಂಗಳವನ್ನುಂಟು ಮಾಡಲಿ. (**ಹೋಗುವರು.**)

**ಮಹಾದೇವ**—ಅಪ್ಪಾ! ಅಮ್ಮ ಕೊಟ್ಟಿದ್ದ ಹಣವನ್ನೆಲ್ಲ ಆ ಬ್ರಾಹ್ಮಣರಿಗೆ ಕೊಟ್ಟುಬಿಟ್ಟೆಯಲ್ಲಾ! ಅಮ್ಮನು ಕೇಳಿದರೆ?

**ತುಕಾರಾಮ**—ಮಗೂ! ನಮ್ಮ ಪಾಂಡುರಂಗನು ಆ ಬ್ರಾಹ್ಮಣರ ರೂಪದಿಂದ ಬಂದಿದ್ದನು. ಆದಕಾರಣ ನಾನು ಹಣವನ್ನು ಅವರಿಗೆ ಕೊಟ್ಟೆನು. ನಮಗೆ ಆ ಪಾಂಡುರಂಗನು ಬೇಕಾದಷ್ಟು ಐಶ್ವರ್ಯವನ್ನು ಕೊಡುವನು. ನಿಮ್ಮ ತಾಯಿಯು ಕೇಳಿದರೆ ಇದೇ ಮಾತನ್ನು ಹೇಳಿದರಾಯಿತು.

**ಕಾಶಿ**—ಅಪ್ಪಾ! ನಿಜವಾಗಿಯೂ ಪಾಂಡುರಂಗನು ನಮಗೆ ಹಣ, ನನಗೆ ಒಡವೆ, ಸೀರೆ ಎಲ್ಲವನ್ನೂ ತಂದುಕೊಡುವನೇನಪ್ಪಾ?

**ತುಕಾರಾಮ**—ಎಲ್ಲವನ್ನೂ ಕೊಡುವನಮ್ಮಾ! ಬನ್ನಿ, ಇನ್ನು ಮನೆಗೆ ಹೋಗೋಣ. **(ಹೋಗುವರು.)**

## ದೃಶ್ಯ ೫—ಮಂಬಾಜಿ ಸಾಧುವಿನ ಮಠ

**(ಆಂಜನೇಯ ದೇವರ ಮುಂದೆ ತುಂಬಾಜಿ ಮೊದಲಾದ ಶಿಷ್ಯರು ಭಜನೆಮಾಡುತ್ತಿರುವರು.) (೧೩)**

**ಮಂಬಾಜಿ**—**(ಆಗ್ರಹದಿಂದ ಪ್ರವೇಶಿಸಿ)** ಸಾಕು ಸಾಕು; ನಿಲ್ಲಿಸಿ, ನಿಮ್ಮ ಭಜನೆ ಗಿಜನೆ ಹಾಗಿರಲಿ, ಈ ದಿನ ನನ್ನ ಮರ್ಯಾದೆ ಹೋಯಿತು, ಮಾನಭಂಗವಾಯಿತು. ನಿಲ್ಲಿಸಿ; ಭಜನೆಯನ್ನು ನಿಲ್ಲಿಸಿ.

**ತುಂಬಾಜಿ**—ಏನು? ಏನು? ತಮಗೆ ಮಾನಭಂಗವಾಯಿತೇ? ಮಾನಭಂಗ? ತಮಗೆ! ಈ ತುಂಬಾಜಿಯ ಗುರುಗಳಿಗೆ! ಮಂಬಾಜಿ ಗುರು ಮಹಾರಾಜರಿಗೆ! ಇಂತಹ ಮಹಾತ್ಮರಿಗೆ ಮಾನಭಂಗ ಮಾಡಿದವರು ಯಾರು? ಏನು ಕಥೆ? ಏನು ವಿಚಿತ್ರ! **(ಇತರ ಶಿಷ್ಯರನ್ನು ನೋಡಿ)** ಎಲವೋ! ಸಾಕು ಮುಚ್ಚಿರೋ ಭಜನೆಯನ್ನು! ಮುಚ್ಚಿ; ಬಾಯಿ ಮುಚ್ಚಿ, ಕಣ್ಣುಮುಚ್ಚಿ, ನೈವೇದ್ಯಕ್ಕೆ ಕೈಹಚ್ಚಿ, ನೀರಾಜನಕ್ಕೆ ಬೆಂಕಿ ಹಚ್ಚಿ, ಬಾಗಿಲು ಮುಚ್ಚಿ!

**ಮುಂಬಾಜಿ**—ತುಂಬಾಜೀ, ಇದೇನೋ ! ಎಂತಹ ಮೂರ್ಖನೋ ನೀನು !

**ತುಂಬಾಜಿ**—(**ಉಳಿದ ಶಿಷ್ಯರನ್ನು ನೋಡಿ**) ಎಂತಹ ಮೂರ್ಖರೋ ನೀವು ! ಮೂರ್ಖರು ! ಗುರುಗಳು ಬಂದಿದ್ದಾರೆ ! ನೋಡಿರೋ ?

**ಮುಂಬಾಜಿ**—ಎಲವೋ ! ಹೊರಡಿ ! ನೀವೆಲ್ಲರೂ ಹೊರಡಿ ! ನಾನು ಒಳಗೆ ಧ್ಯಾನದಲ್ಲಿ ಕುಳಿತುಕೊಳ್ಳುವೆನು ! ತುಂಬಾಜೀ, ನೀನು ಮಾತ್ರ ಬಾಗಿಲಲ್ಲೇ ಇರು ; ನನ್ನ ಧ್ಯಾನಕ್ಕೆ ಭಂಗಮಾಡತಕ್ಕವರು ಯಾರು ಬಂದರೂ ಒಳಗೆ ಬಿಡಬೇಡ.

**ತುಂಬಾಜಿ**—ಗುರುಗಳೇ, ತಮ್ಮ ಅಂತರಂಗ ಪ್ರೀತಿಗೆ ಪಾತ್ರರಾದವರು ಯಾರಾದರೂ ಬಂದರೋ ?

**ಮುಂಬಾಜಿ**—ಯಾರಾದರೇನು ? ಪ್ರತ್ಯಕ್ಷವಾಗಿ ಹರಿಯೇ ಬರಲಿ, ಶಂಭುವೇ ಬರಲಿ, ಸ್ವಯಂಭುವೇ ಬರಲಿ, ಒಳಗೆ ಬಿಡಲೇ ಕೂಡದು ; ನಾನು ಧ್ಯಾನದಲ್ಲಿರುವೆನು.

**ತುಂಬಾಜಿ**—ಅಪ್ಪಣೆ ಗುರುಗಳೇ ! ಹಾಗಾದರೆ ತಾವು ನಿಶ್ಚಿಂತರಾಗಿ ದೀರ್ಘ ಧ್ಯಾನದಲ್ಲಿದ್ದು ಬಿಡಿ. (**ಉಳಿದ ಶಿಷ್ಯರನ್ನು ನೋಡಿ**) ಎಲವೋ ನಡೆಯಿರೋ ! ನಡೆಯಿರೋ ! , ಗುರುಗಳು ಏಕಾಂತದಲ್ಲಿರಲಿ. (**ಶಿಷ್ಯರು ಹೋಗುವರು. ತುಂಬಾಜಿ ಮಾತ್ರ ಬಾಗಿಲಲ್ಲಿ ನಿಂತಿರುವನು.**)

**ಮುಂಬಾಜಿ**—(**ಆತ್ಮಗತ**) ಎಲ ! ಎಲ ! ತುಕ್ಕಾ !! ನನ್ನನ್ನು ಕಟ್ಟಿಹಾಕಿಸಲು ಯತ್ನಿಸಿದೆಯಾ ! ಆಹಾ ! ದುರಾತ್ಮಾ ! (**ಆಲೋಚಿಸಿ**) ಆ ದುರಾತ್ಮನಿಗೆ ಮಾನಭಂಗಮಾಡಬೇಕೆಂದು ಹೋದ ನನಗೇ ಆ ಮೂರು ಕಾಸಿನ ಹೆಂಗಸಿನಿಂದ ಅವಮಾನ ಮಾಡಿಸಿ, ಮುಖದ ಮೇಲೆ ಹಿಟ್ಟನ್ನೆರಚಿಸಿ, ಬೊಯ್ಸಿ ಕಳುಹಿಸಿದನಲ್ಲಾ ! ಎಲ ಠಕ್ಕಾ ! ಇಂತಹ ಅಯೋಗ್ಯನು ಕವಿತೆಯನ್ನು ಬೇರೆ ಮಾಡಿ ಜನರಲ್ಲಿ ಕೀರ್ತಿಯನ್ನು ಸಂಪಾದಿಸಿರುವನು ! ವೇದಾರ್ಥವೆಲ್ಲವನ್ನೂ ಮಹಾರಾಷ್ಟ್ರ ಭಾಷೆಯ ಕವಿತೆಯಲ್ಲಿ ಹೇಳಿರುವನು ! ಇವನಿಗೆ, ಈ ಅಲ್ಪನಿಗೆ, ವೈಶ್ಯನಿಗೆ, ಕವಿತೆಯು ಹೇಗೆ ಬಂತು ! (**ಆಲೋಚಿಸಿ**) ಅಥವಾ ಇವನು

ಕವಿತೆಯನ್ನು ಮಾಡಿದರೂ ಮಾಡಲಿ, ಅದರಿಂದ ನಮ್ಮಪ್ಪನ ಮನೆಯ ಗಂಟೇನು ಹೋದೀತು! ಆದರೆ ಸದ್ಯಕ್ಕೆ ಸಾಧುವೆನಿಸಿಕೊಂಡು ಮಹಾ ಪ್ರಖ್ಯಾತನಾಗಿ ನಮ್ಮ ಪ್ರಸಿದ್ಧಿಗೆ ಕುಂದಕವನ್ನು ತಂದನಲ್ಲಾ! ಜನರ ಕಣ್ಣಿಗೆ ತುಕಾರಾಮನ ಮುಂದೆ ಈ ಮಂಬಾಜಿ ಸಾಧು ಮಹಾರಾಜನು ಪರ್ವತದ ಮುಂದೆ ಪರಮಾಣುವಾದನಲ್ಲಾ! ಎಂತಹ ಅವಮಾನ! ಇದನ್ನು ನಾನು ಹೇಗೆ ಸಹಿಸಿಕೊಂಡು ಸುಮ್ಮನಿರಲಿ! ಆಹಾ! ಸಾಧು! ಸಾಧುವಾದನೇ ತುಕ್ಕನು!! ಯಾರನ್ನು ನೋಡಿದರೂ "ತುಕಾರಾಮ ಸಾಧುಗಳು, ತುಕಾರಾಮ ಸಾಧು ಮಹಾರಾಜರು" ಎಂದು ಅವನ ದರ್ಶನಕ್ಕೆ ಹೋಗಿ, ಅವನ ಕಾಲಿಗೆ ಬಿದ್ದು, ಅವನೊಡನೆ ವಿಠಲ ಭಜನೆ ಮಾಡಿ, ಅವನ ಸೇವೆ ಮಾಡಿ ಬರುತ್ತಿರುವರಲ್ಲಾ! ಇವನ ಪ್ರಾಬಲ್ಯದಿಂದ ನನ್ನ ದರ್ಶನಕ್ಕೂ ನಮ್ಮ ಆಂಜನೇಯನ ದರ್ಶನಕ್ಕೂ ಜನಗಳು ಬರುವುದೇ ದಿನ ದಿನಕ್ಕೂ ಕಡಿಮೆಯಾಗಿ ಕಡೆಗೆ ಒಬ್ಬಿಬ್ಬರು ಸಹ ನಮ್ಮ ಮಠಕ್ಕೆ ಬರುವುದೇ ನಿಂತುಹೋಯಿತು. ಯಾರ ಬಾಯಲ್ಲಿ ನೋಡಿದರೂ, "ತುಕಾರಾಮ ಸಾಧುಗಳು! ತುಕಾರಾಮ ಮಹನೀಯರು ತುಕಾರಾಮ ಗುರುಮಹಾರಾಜರು!" ಎಂಬ ಮಾತೇ ಅಲ್ಲದೆ "ಮಂಬಾಜಿ ಸಾಧುಗಳು! ಮಂಬಾಜಿ ಗುರುಮಹಾರಾಜರು!" ಎಂಬ ಮಾತನ್ನು ಸ್ವಪ್ನದಲ್ಲಿ ಕೇಳೋಣವೆಂದರೂ ಇಲ್ಲವಾಗಿರುವುದು! ಇದೆಂತಹ ಆಶ್ಚರ್ಯ! ಏನು ಕಥೆ!! **(ಚಿಂತಿಸಿ)** ಇರಲಿ, ಏನಾದರೇನು! ಅವನಿಗೆಷ್ಟು ಪ್ರಾಶಸ್ತ್ಯವು ಬಂದರೇನು! ರತ್ನವು ರತ್ನವೇ, ಗಾಜು ಗಾಜೇ!

**ರಂಭೆಯೆಂಬ ನಾಯಕಿ—(ಬಾಗಿಲಿಗೆ ಬಂದು ಒಳಹೊಗುತ್ತಿರುವಳು.) (ಗಳ)**

**ತುಂಬಾಜಿ**—**(ತಡೆದು)** ನಿಲ್ಲು! ಯಾರು ನೀನು? ಒಳಗೆ ಹೋಗಬೇಡ.

**ರಂಭೆ**—ಇದೇನು ತುಂಬಾಜೀ, ಹೀಗೆ ಕೇಳುವೆ? ನಾನು ರಂಭೆಯಲ್ಲವೇ? ಅದೇಕೆ ನನ್ನನ್ನು ತಡೆಯುವೆ?

**ತುಂಬಾಜಿ**—ನೀನು ರಂಭೆಯೇ ಆಗು, ಜಗದಂಬೆಯೇ ಆಗು, ಚಿನ್ನದ

ಬೊಂಬೆಯೇ ಆಗು, ನನಗೇನು ? ಈ ದಿನ ಯಾರನ್ನೂ ಒಳಗೆ ಬಿಡ ಕೂಡದೆಂಬ ನಿರ್ಬಂಧವುಂಟು.

**ರಂಭೆ**—ಇತರರಿಗೆ ಆ ನಿರ್ಬಂಧವಿರಬಹುದು ; ಗುರು ಮಹಾರಾಜರ ಪ್ರಿಯ ಶಿಷ್ಯಳಾದ ಈ ರಂಭೆಗೂ ಆ ನಿರ್ಬಂಧಕ್ಕೂ ಏನು ಸಂಬಂಧ ?

**ತುಂಬಾಜಿ**—ಸರಿ ! ಸಂಬಂಧಕ್ಕೆ ನಿರ್ಬಂಧವಿಲ್ಲದ ಮಾತ್ರಕ್ಕೇ ಈ ನಿರ್ಬಂಧಕ್ಕೆ ಸಂಬಂಧವಿಲ್ಲವಾದೀತೇ ? ನಾನು ಬೇರೆ ನಿನ್ನನ್ನು ಒಳಗೆ ಬಿಡುವುದಿಲ್ಲ.

**ಮಂಬಾಜಿ**—(ನೋಡಿ) ಇವನೆಂತಹ ಮೂರ್ಖನು ! ನಮ್ಮ ರಂಭೆಯು ಬಂದರೆ ತಡೆಯುತ್ತಿರುವನಲ್ಲಾ ! (ಪ್ರಕಾಶಂ) ಎಲವೋ ಕತ್ತೇ ! ಅವಳನ್ನು ತಡೆದು ಅರಚಿ ಅರಚಿ ನನ್ನ ಧ್ಯಾನಕ್ಕೆ ಭಂಗಮಾಡಿದೆಯಾ ? ಅಯೋಗ್ಯ !!

**ತುಂಬಾಜಿ**—ನಾನೇನು ಮಾಡಿದೆ ಗುರುಗಳೇ ? ನಿಮ್ಮ ಧ್ಯಾನಕ್ಕೆ ಭಂಗ ಮಾಡಿದವಳು ಈ ರಂಡೆ.

**ಮಂಬಾಜಿ**—( ಕೋಪದಿಂದ ) ಏನು ? ಏನೆಂದೆ ? ಅವಳು ರಂಡೆಯೇ ?

**ತುಂಬಾಜಿ**—ಅಲ್ಲ, ರಂಭೆ ! ರಂಭೆ ! ತಮ್ಮ ಪ್ರಿಯ ಶಿಷ್ಯಳಾದ ರಂಭೆ ! ಗುರುಗಳೇ !

**ಮಂಬಾಜಿ**—ಹಾಗೆ ಹೇಳು ರಂಭೆ ! ರಂಭೆ ! ಇವಳು ಸಾಕ್ಷಾದ್ರಂಭೆಯೇ ನಿಜ.

**ಕಂ॥** ರಂಭೆಯನೀ ಮುಖಜಿತ ಶಶಿ।
ಬಿಂಬೆಯ ನಲಕಾಳಿಧೂತ ರೋಲಂಬೆಯನೀ ||
ಸಂಭಾವನೀಯ ಸುಗುಣ ಕ।
ದಂಬೆಯ ತಡೆದಪರೆ ಮತ್ಪದಾಲಂಬೆಯ ನೀಂ ||೧೧||

ಎಲವೋ ತುಂಬಾಜೀ, ಇಂತಹ ಮಹಾ ಭಕ್ತೆಯರಾದ ತರುಣಿಯರನ್ನು, ಅದರಲ್ಲಿಯೂ ನಮ್ಮ ಪ್ರಿಯ ಶಿಷ್ಯಳಾದ ಈ ರಂಭೆಯನ್ನು ತಡೆಯಬಾರದೆಂಬುದು ನಿನಗೆ ತಿಳಿಯದೇನೋ ಮೂರ್ಖಾ ?

**ತುಂಬಾಜಿ**—ಗುರುಗಳೇ! ಹರಿಯೇ ಬರಲಿ, ಶಂಭುವೇ ಬರಲಿ, ಸ್ವಯಂಭುವೇ ಬರಲಿ, ಬಿಡಬೇಡವೆಂದು ಅಪ್ಪಣೆ ಮಾಡಿದ್ದಿರಿ! ಆ ಹರಿಗಿಂತಲೂ, ಶಂಭುವಿಗಿಂತಲೂ ಸ್ವಯಂಭುವಿಗಿಂತಲೂ ಈ ರಂಭೆಯು ದೊಡ್ಡವಳೆಂದು ನನಗೆ ಗೊತ್ತಾಗಲಿಲ್ಲ ಗುರುಗಳೇ. ಅಲ್ಲದೆ ಆ ತ್ರಿಮೂರ್ತಿಗಳಿಗಿಂತಲೂ ಈ ರಂಭೆಯಲ್ಲಿಯೇ ತಾವು ಹೆಚ್ಚು ಪ್ರೀತಿಯಿಟ್ಟಿರುವಿರೆಂದು ನಾನು ತಿಳಿದಿರಲಿಲ್ಲ. ಅದರಿಂದ ತಡೆದೆನು.

**ಮಂಬಾಜಿ**—ಅಯೋಗ್ಯ! ತ್ರಿಮೂರ್ತಿಗಳು ಬಂದರೆ ಬಿಡಬೇಡವೆಂದ ಮಾತ್ರಕ್ಕೇ ನಮ್ಮ ರಂಭೆಯು ಬಂದರೆ ಬಿಡಬೇಡವೆಂದು ಹೇಳಿದಂತಾಯಿತೇನೋ! ಮೂರ್ಖ! ಸಾಕು ನಿನ್ನ ತಲೆಹರಟೆಗಳು! ಪಶುಪತಿಯ ಸನ್ನಿಧಿಗೆ ಬರಲು ನಂದಿಗೆ ತಡೆಯುಂಟೇನೋ?

**ತುಂಬಾಜಿ**—ಇಲ್ಲ ಗುರುಗಳೇ ನಿಜ! ತಾವೇ ಸಾಕ್ಷಾತ್ ಪಶುಪತಿ, ಅವಳೇ ಹಂದಿ.

**ಮಂಬಾಜಿ**—ಏನೆಂದೆ? ಏನೆಂದೆ?

**ತುಂಬಾಜಿ**—'ಅವಳು ನಂದಿ ತಾವು ಪಶುಪತಿ' ಅಂದೆನು.

**ಮಂಬಾಜಿ**—(**ಆತ್ಮಗತ**) ಈ ಅಯೋಗ್ಯನಿಗೆ ಸ್ವಲ್ಪವೂ ಭಯವಿಲ್ಲ. ನನ್ನ ಅಂತರ್ಯ ವಿಚಾರಗಳೆಲ್ಲವೂ ಇವನಿಗೆ ತಿಳಿದಿರುವುದರಿಂದ ನಾನು ಇವನಲ್ಲಿ ವಿರಸ ತಂದುಕೊಳ್ಳುವುದೂ ಸರಿಯಲ್ಲ. ಏನು ಮಾಡಲಿ!

**ರಂಭೆ**—(**ಮುಂದೆ ಬಂದು ಮಂಬಾಜಿಗೆ ನಮಸ್ಕರಿಸುವಳು.**)

**ಮಂಬಾಜಿ**—(**ನೋಡಿ ಸಂತೋಷದಿಂದ**) ರಂಭೇ! ರಂಭೆ! ಬಂದೆಯಾ? ಬಾ! ಹೀಗೆ ಬಾ! ನೀನು ಸಕಾಲಕ್ಕೆ ಬಂದೆ. ಈಗ ತಾನೇ ನೀನು ನನ್ನ ಧ್ಯಾನದಲ್ಲಿ ಬಂದಿದ್ದೆ.

**ರಂಭೆ**—ಓಹೋ! ಹಾಗಾದರೆ ತಾವು ನನ್ನ ಧ್ಯಾನದಲ್ಲಿದ್ದಿರೇನು? ನಾನು ಆಂಜನೇಯನ ಧ್ಯಾನದಲ್ಲಿದ್ದಿರೆಂದು ತಿಳಿದಿದ್ದೆನು.

**ಮಂಬಾಜಿ**—ನಾನೇನೋ ಆಂಜನೇಯನ ಧ್ಯಾನದಲ್ಲಿಯೇ ಇದ್ದೆನು. ಅದರಲ್ಲಿ ನಿನ್ನ ಸಂಬಂಧವೂ ಸ್ವಲ್ಪವಿತ್ತು.

**ತುಂಬಾಜಿ**—(**ಆತ್ಮಗತ**) ದೇವರ ಧ್ಯಾನ ಮಾಡುವಾಗಲೆಲ್ಲವೂ ಇವರಿಗೆ ಸೂಳೆಯ ಧ್ಯಾನವು ಜೊತೆಯಲ್ಲಿಯೇ ಇರುವುದೋ! ಅಥವಾ ಇವರ ಮನಸ್ಸಿನಲ್ಲಿ ಆ ದೇವರ ಸ್ಥಲವಲ್ಲ ಸೂಳೆಯೇ ಬಂದು ಕುಳಿತುಕೊಳ್ಳು ವಳೋ!

**ರಂಭೆ**—(**ಮಂಬಾಜಿಯನ್ನು ನೋಡಿ**) ಸ್ವಾಮಿ, ಕೂಗಬೇಡಿ, ಯಾರಾದರೂ ಕೇಳಿದರೆ ಮಾನ ಹೋದೀತು!

**ತುಂಬಾಜಿ**—(**ಆತ್ಮ**) ಮಾನವಿದ್ದರಲ್ಲವೇ ಹೋಗುವುದು. ನಮ್ಮ ಗುರು ಗಳಿಗೆ ಆ ಭಯವು ಲೇಶವೂ ಇಲ್ಲ.

**ಮಂಬಾಜಿ**—ರಂಭೇ! ನನಗೆ ದೇವರಲ್ಲಿ ಎಷ್ಟು ಭಕ್ತಿಯಿರುವುದೋ ನಿನ್ನಲ್ಲಿ ಅಷ್ಟು ಪ್ರೇಮವಿರುವುದು. ಆದುದರಿಂದ ನಿನಗೆ ನಮ್ಮ ಆಂಜನೇಯನ ಸಂದರ್ಶನವನ್ನು ಮಾಡಿಸಬೇಕೆಂದು ಆತನೊಡನೆ ಮಾತನಾಡುತ್ತಿದ್ದೆನು.

**ತುಂಬಾಜಿ**—(**ಆತ್ಮಗತ**) ರಂಭೆಯು ಈ ಪ್ರತ್ಯಕ್ಷಾಂಜನೇಯನನ್ನು ನೋಡಿಯೇ ಇರುವಳಲ್ಲಾ!

**ರಂಭೆ**—ಸಂತೋಷ! ಹಾಗಾದರೆ ತಾವು ನನಗೆ ಆಂಜನೇಯನ ದರ್ಶನ ಮಾಡಿಸಿ ಆತನು ನನ್ನೊಡನೆ ಮಾತನಾಡುವಂತೆ ಮಾಡಬೇಕು!

**ಮಂಬಾಜಿ**—ಆಗಲಿ; ಸ್ವಲ್ಪ ತಾಳು, ಮತ್ತೊಂದಾವೃತ್ತಿ ನಾನು ಆಂಜ ನೇಯನನ್ನು ಕೇಳುವೆನು. ನೀನು ಸ್ವಲ್ಪ ದೂರದಲ್ಲಿ ಕಣ್ಣು ಮುಚ್ಚಿ ಕೊಂಡು ನಿಲ್ಲು.

**ರಂಭೆ**—(**ಕಣ್ಣು ಮುಚ್ಚಿ ನಿಲ್ಲುವಳು.**)

**ಮಂಬಾಜಿ**—(**ಧ್ಯಾನದಲ್ಲಿ ದೇವರೊಡನೆ ಮಾತನಾಡುವಂತೆ ನಟಿಸುತ್ತ**) ಹುಂ, ಆಗಬಹುದು. ಹುಂ, ಅಪ್ಪಣೆ. ಹುಂ, ತಮ್ಮ ಆಜ್ಞೆಯನ್ನು ರಂಭೆಗೆ ತಿಳಿಸುವೆನು. (**ಕಣ್ತೆರೆದು ರಂಭೆಯನ್ನು ನೋಡಿ**) ರಂಭೇ, ಕೇಳಿದೆಯೋ ಆಂಜನೇಯ ಸ್ವಾಮಿಯು ಹೇಳಿದುದನ್ನು?

**ರಂಭೆ**—(**ಆಶ್ಚರ್ಯದಿಂದ**) ಏನು ? ಏನೆಂದು ಹೇಳಿದನು ? ಆಂಜನೇಯ ಸ್ವಾಮಿಯು ? ನನಗೊಂದೂ ಕೇಳಲಿಲ್ಲವಲ್ಲಾ ! ತಾವೇ "ಹುಂ ! ಹುಂ ! ಆಗಬಹುದು, ಅಪ್ಪಣೆ ! ಹುಂ" ಎಂದು ಹೇಳುತ್ತಿದ್ದಿರಿ !

**ತುಂಬಾಜಿ**—(**ಆತ್ಮಗತ**) ಅದು ಬಾಲವಿಲ್ಲದ ಪ್ರತ್ಯಕ್ಷ ಮಾರುತಿಯ ಶಂಖ ಧ್ವನಿ.

**ಮಂಬಾಜಿ**—ರಂಭೇ ! ದೇವರು ಮಾತನಾಡಿದುದು ನಿಮ್ಮಂತಹ ಸಾಮಾನ್ಯರ ಕಿವಿಗೆ ಬೀಳುವುದಿಲ್ಲ ! ಅದಿರಲಿ ! ರಂಭೇ ! ನೀನು ಆ ತುಕ್ಕನನ್ನು ಬಲ್ಲೆಯಷ್ಟೆ ?

**ರಂಭೆ**—(**ಆಶ್ಚರ್ಯದಿಂದ**) ತುಕ್ಕ ! ತುಕ್ಕನೆಂದರೆ ಯಾರು ? ಆ ತುಕಾರಾಮ ಗುರುಮಹಾರಾಜರೇನು ? ಅವರನ್ನು ನೋಡಿರುವೆನು.

**ಮಂಬಾಜಿ**—(**ಕಾತರದಿಂದ**) ಎಲೆ ಎಲೆ ! ರಂಭೇ ! ಇದೇನು ! ಅವನನ್ನು, ಆ ಅಲ್ಪನನ್ನು ಗುರುಮಹಾರಾಜನೆಂದು ಹೇಳುವೆ? ಹಾಗೆ ಹೇಳಬಾರದು ! ಅವನು ಅಲ್ಪನು, ಅಯೋಗ್ಯನು, ಅವಿಚಾರಿ, ದುರಾಚಾರಿ, ಕೇವಲ ಬೂಟಾಟಕದ ನಟನೆಯಿಂದ ಜನರ ಕಣ್ಣಿಗೆ ಮಣ್ಣನ್ನೆರಚಿ ತಾನು ಗುರುವೆಂದು ಹೊಗಳಿಸಿಕೊಳ್ಳುತ್ತಿರುವನು. ಅವನ ವಿಚಾರವು ನಿನಗೆ ತಿಳಿಯದು ! ಈಗ ಆಂಜನೇಯನು ಆ ತುಕ್ಕನ ವಿಷಯದಲ್ಲಿ ಒಂದು ಸಂದೇಶವನ್ನು ನಿನಗೆ ತಿಳಿಸುವಂತೆ ನನ್ನೊಡನೆ ಹೇಳಿದ್ದಾನೆ.

**ರಂಭೆ**—ಹಾಗೆಯೇನು ? ಅದೇನು ಅಪ್ಪಣೆಯಾಗಬೇಕು.

**ಮಂಬಾಜಿ**—ಕೇಳು, ನೀನು ಹಿಂದೆ ಸ್ವರ್ಗಲೋಕದ ರಂಭೆಯಾಗಿದ್ದೆ...

**ರಂಭೆ**—(**ಸಂತೋಷದಿಂದ**) ಓಹೋ ! ಹಾಗೇನು ? ಅನಂತರ?

**ಮಂಬಾಜಿ**—ಆಗ ನೀನು ಶುಕ ಮಹರ್ಷಿಗಳ ವ್ರತ ಭಂಗಮಾಡಲಾರದೆ ಹೋದೆಯೆಂದು ಕೋಪಿಸಿ ಇಂದ್ರನು ನಿನ್ನನ್ನು ಶಪಿಸಿ ಈ ಮರ್ತ್ಯಲೋಕಕ್ಕೆ ಕಳುಹಿಸಿರುವನು !

**ರಂಭೆ**—(**ಸಂತೋಷಾಶ್ಚರ್ಯಗಳಿಂದ**) ಆಹಾ ! ನನಗೀ ವಿಷಯವು ತಿಳಿದೇ ಇರಲಿಲ್ಲವಲ್ಲಾ !

**ಮಂಬಾಜಿ**—ನಿಜ! ಇಂದ್ರನ ಶಾಪದಿಂದ ನಿನಗೆ ಪೂರ್ವಜನ್ಮ ಜ್ಞಾನ ಎಲ್ಲ. ನಾನು ಹಿಂದೆ ಅದೇ ಇಂದ್ರಲೋಕದಲ್ಲಿ ಚಿತ್ರರಥನೆಂಬ ಗಂಧರ್ವನಾಗಿದ್ದೆನು.

**ತುಂಬಾಜಿ**—ನಾನು ಏನಾಗಿದ್ದೆನೋ!

**ಮಂಬಾಜಿ**—ನೀನು ಕತ್ತೆಯಾಗಿದ್ದೆ! ಅಯೋಗ್ಯಾ!....ರಂಭೇ, ನಿನಗೋಸ್ಕರ ನಾನು ಇಂದ್ರನೊಡನೆ ಜಗಳವಾಡಿ ಕಡೆಗೆ ನಿನ್ನಂತೆಯೇ ಆತನ ಕೋಪಕ್ಕೆ ಪಾತ್ರನಾಗಿ ಆತನ ಶಾಪದಿಂದ ಈ ಮನುಷ್ಯ ಜನ್ಮವನ್ನೆತ್ತಬೇಕಾಗಿ ಬಂತು! ಆದುದರಿಂದಲೇ ನಾವಿಬ್ಬರೂ ಇಲ್ಲಿ ಸೇರಿದ್ದೇವೆ.

**ರಂಭೆ**—ಇದು ನಿಜವೇ?

**ತುಂಬಾಜಿ**—**(ಆತ್ಮ)** ನಮ್ಮ ಗುರುಗಳು ಹೇಳುವುದೆಲ್ಲವೂ ನಿಜವೇ! ಅವರಿಗೆ ಸುಳ್ಳೆಂಬುದು ಸ್ವಪ್ನದಲ್ಲಿಲ್ಲ.

**ಮಂಬಾಜಿ**—ರಂಭೇ! ಸಂದೇಹವೇಕೆ? ನನ್ನ ಮಾತನ್ನು ನಂಬು. ನಾನು ಮಹಾ ತಪಸ್ವಿಯಾದುದರಿಂದ ಪೂರ್ವಜನ್ಮ ಜ್ಞಾನವನ್ನು ಪಡೆದು ಇವೆಲ್ಲವನ್ನೂ ಆಂಜನೇಯನ ಕೃಪೆಯಿಂದ ಕರತಲಾಮಲಕವಾಗಿ ತಿಳಿದಿರುವೆನು. ಈಗ ನೀನು ಮತ್ತೆ ಇಂದ್ರಲೋಕಕ್ಕೆ ಹೋಗಬೇಕಾದರೆ ಈ ಜ್ಞಾನಿಯಾದ ಗಂಧರ್ವನ ಪ್ರೀತಿಯನ್ನು ಪಡೆಯಲೇ ಬೇಕು.

**ತುಂಬಾಜಿ**—**(ಆತ್ಮಗತ)** ನಿಜ! ಅಜ್ಞಾನಿಯಾದ ಇವರ ಪ್ರೀತಿಯನ್ನು ಪಡೆದರೆ ಇವಳು ಸ್ವರ್ಗಸ್ಥಳೇ ಆಗುವಳು.

**ರಂಭೆ**—ಹಾಗಾದರೆ ಈಗ ನಾನು ಏನು ಪ್ರಯತ್ನ ಮಾಡಬೇಕೆಂದು ಅಪ್ಪಣೆ ಕೊಡುವಿರಿ?

**ಮಂಬಾಜಿ**—ನನ್ನಪ್ಪಣೆಯೇನು! ಅದು ಆಂಜನೇಯನ ಅಪ್ಪಣೆ! ನೀನು ಈ ಜನ್ಮದಲ್ಲಿ ಆ ತುಕ್ಕನ ಬೂಟಾಟಕದ ಸಾಧುತನವನ್ನು ಬಯಲು ಮಾಡಿ ಅವನನ್ನು ಭಂಗಪಡಿಸಿ ಬರಬೇಕೆಂದು ನಿನ್ನೊಡನೆ ಹೇಳುವಂತೆ ನಮ್ಮ ಆಂಜನೇಯನು ತನ್ನ ಸಂದೇಶವನ್ನು ತಿಳಿಸಿರುತ್ತಾನೆ.

**ರಂಭೆ**—ಗುರುಗಳೇ! ತುಕಾರಾಮ ಗುರುಮಹಾರಾಜರು ಬೂಟಾಟಕದ ನಟನೆಯ ಮನುಷ್ಯರಲ್ಲವೆಂತಲೂ ಮಹಾ ಜ್ಞಾನಿಯೆಂತಲೂ, ಲೋಕವೇ ಆತನನ್ನು ಹೊಗಳುತ್ತಿರುವುದಲ್ಲಾ!

**ಮಂಬಾಜಿ**—ಅಯ್ಯೋ! ರಂಭೇ! ಲೋಕದ ಅವಿವೇಕಿ ಜನಗಳ ಮಾತುಗಳನ್ನು ಕೇಳಿ ನಮ್ಮ ಶಿಷ್ಯಳಾದ ನೀನೂ ಹೀಗೆ ಮರುಳಾಗಬಹುದೇ? ಆ ಅಲ್ಪನನ್ನು ಗುರುಮಹಾರಾಜನೆಂದು ಹೇಳಬಹುದೇ? ನನ್ನ ಮಾತನ್ನು ಕೇಳು: ಕರ್ಮಠರೂ ವೇದಶಾಸ್ತ್ರಜ್ಞರೂ ಮಹಾ ತಪಸ್ವಿಗಳೂ ತ್ರಿಕಾಲಜ್ಞಾನಿಗಳೂ ಆದ ನಮ್ಮಂತಹ ಬ್ರಹ್ಮಜ್ಞಾನಿಗಳು ಸಾಧುಗಳೆನಿಸಬಲ್ಲರೇ ಹೊರತು, ಈ ಬೀದಿಬೀದಿಯಲ್ಲಿ ತಿರುಪದ ಪದಗಳನ್ನು ಹಾಡಿಕೊಂಡು ತಿರುಗುವ ವಣಿಜನಾದ ತಿರುಕನು ನಮ್ಮಂತೆ ಸಾಧುವಾಗಬಲ್ಲನೇ? ಸತ್ಪುರುಷನೆನಿಸಲರ್ಹನೇ? ಎಲ್ಲಿಯಾದರೂ ನಮ್ಮಂತಹ ಮಹನೀಯರ ಸೇವೆಮಾಡಿಕೊಂಡು ನಮಗೆ ಶಿಷ್ಯನಾಗಬೇಕಾದ ಆ ಧೂರ್ತನು ಗುರುವೆನಿಸಬಲ್ಲನೇ? ಸಾಧುವೆನಿಸಬಲ್ಲನೇ? ನೀನಾ ಜನರ ಮರುಳು ಮಾತುಗಳನ್ನು ನಂಬಬೇಡ. ತುಕ್ಕನು ಸಾಧುವೂ ಅಲ್ಲ, ಗುರುವೂ ಅಲ್ಲ. ಕೇವಲ ನಟನೆಯ ಜೋಗಿ.

**ತುಂಬಾಜಿ**—(ಆತ್ಮಗತ) ಇರಬಹುದು! ಆತನು ಯಾವಾಗಲೂ ವಿಠಲ ಭಜನೆ ಮಾಡುತ್ತಾನೆ. ಏಕಾದಶೀ ವ್ರತ, ಹರಿಕೀರ್ತನ, ಸದುಪದೇಶ, ವೇದಾಂತ ಬೋಧನೆ ಇವುಗಳನ್ನು ಮಾಡುತ್ತಾನೆ. ಅವನು ಯೋಗ್ಯನಲ್ಲ. ಈ ನಮ್ಮ ಗುರುಗಳು! ಆಹಾ! ಪಾಪ! ಪಾಪ!! ಎಂತೆಂತಹ ಪುಣ್ಯಕಾರ್ಯಗಳನ್ನು ಮಾಡುತ್ತಾರೆ! ಏನು ಕಥೆ!! ಅದನ್ನು ನಾನೇ ಬಲ್ಲೆ! ನಮ್ಮ ದೇವರೇ ಬಲ್ಲ!

**ಮಂಬಾಜಿ**—ರಂಭೇ! ಮುಖ್ಯವಾಗಿ ಹಿಂದೆ ಆ ಮೇನಕೆಯು ತನ್ನ ಚಾತುರ್ಯದಿಂದ ಆ ವಿಶ್ವಾಮಿತ್ರನನ್ನು ತನಗೆ ದಾಸಾನುದಾಸನನ್ನಾಗಿ ಮಾಡಿಕೊಂಡು ನಾಯಿಯಂತೆ ಆಡಿಸಿಬಿಟ್ಟಳು. ಈಗ ನೀನು ನಿನ್ನ ಜನ್ಮೋದ್ಧಾರಕ್ಕಾಗಿ ಆ ತುಕ್ಕನನ್ನು ಕತ್ತೆಯನ್ನಾಗಿ ಮಾಡಿ

ಲೋಕದಲ್ಲಿ ಅವನಂತಹ ಕಪಟಿಯೂ, ಅಯೋಗ್ಯನೂ, ಜನವಂಚಕನೂ, ಅಲ್ಪನೂ, ಧೂರ್ತನೂ ಯಾರೂ ಇಲ್ಲವೆಂದು ಪ್ರಕಟಮಾಡಿ ಅವನನ್ನು ಭಂಗಪಡಿಸಲೇ ಬೇಕು. ಆಗ ನಮ್ಮ ಆಶೀರ್ವಾದದಿಂದ ಆಂಜನೇಯನು ನಿನಗೆ ಸದ್ಗತಿಯನ್ನುಂಟುಮಾಡುವನು.

**ರಂಭೆ**—ಸರಿ! ಸಂತೋಷ! ಹಾಗಾದರೆ ನಾನು ಅದಕ್ಕೆ ತಕ್ಕ ಪ್ರಯತ್ನವನ್ನು ಮಾಡಲೇ ಮಾಡುವೆನು.

**ತುಂಬಾಜಿ**—(**ಆತ್ಮಗತ**) ಮೆಲ್ಲ ಮೆಲ್ಲನೆ ಪ್ರಯತ್ನಿಸು. ಇಲ್ಲವಾದರೆ ಪಲ್ಲಟವಾಗಿ ಹಲ್ಲು ಮುರಿದು ತಲ್ಲಣಿಸಿ ಬೀಳಬೇಕಾದೀತು. (**ಒಳಕ್ಕೆ ಬರುವನು.**)

**ಮುಂಬಾಜಿ**—ಛೀ! ಅಯೋಗ್ಯಾ! ಒಳಗೇತಕ್ಕೆ ಬಂದೆ?

**ತುಂಬಾಜಿ**—ಗುರುಗಳೇ, ಊಟಕ್ಕೆ ಹೊತ್ತಾಯಿತೆಂದು ಹೇಳಲು ಬಂದೆನು. ಆಟದಲ್ಲಿರುವವರು ಊಟಕ್ಕೆ ಬರುವಿರಾ! ಸರಿ! ಸರಿ!!

**ಮುಂಬಾಜಿ**—ಎಲವೋ! ಊಟಕ್ಕೂ ನಿನ್ನ ಮುಖಕ್ಕೂ ಬೆಂಕಿ ಹಚ್ಚಲಿ!

**ತುಂಬಾಜಿ**—ಅದೇತಕ್ಕೆ ಗುರುಗಳೇ ನನ್ನ ಮುಖವು ಅಷ್ಟು ಅಸಹ್ಯಕರವಾಗಿದೆಯೇ?

**ಮುಂಬಾಜಿ**—ಹಾಗಲ್ಲವೋ! ನಾನೀ ದಿನ ಕ್ರೂರವಾದ ನಿರಾಹಾರ ವ್ರತವನ್ನು ಮಾಡಬೇಕೆಂದಿದ್ದೇನೆ.........(**ಕಾತರದಿಂದ**) ಎಲವೋ! ಯಾರಾದರೂ ಒಳಗೆ ಬಂದಾರು ನೋಡು! ಹೋಗು! ಹೊರಡು.

**ತುಂಬಾಜಿ**—(**ಬಾಗಿಲಿಗೆ ಬಂದು**) ಆಹಾಹಾ! ಇವರು ಗುರುಗಳು! ನಾನು ಶಿಷ್ಯ! ನಾನು ನಿಜವಾಗಿಯೂ ಶಿಷ್ಯನಾಗಿದ್ದರೆ ಇವರು ನನಗೂ ಇಂತಹ ಉಪದೇಶವನ್ನೇ ಮಾಡುತ್ತಿದ್ದರೋ ಏನೋ! "ಹುಚ್ಚನ ಮದುವೆಯಲ್ಲಿ ಉಂಡವನೇ ಜಾಣ" ಎಂಬಂತೆ ಮೆಲ್ಲನೆ ಬಂದ ಲಾಭವನ್ನು ಹಿರಿದುಕೊಳ್ಳುವುದಕ್ಕೆ ನಾನು ಈ ಸ್ಥಳದಲ್ಲಿ ಶಿಷ್ಯನಂತೆ ನಟಿಸಬೇಕಾಗಿದೆ. ಸಮಯ ನೋಡಿ ಇವರಿಗೆ ತಕ್ಕ ಬುದ್ಧಿಯನ್ನು ಕಲಿಸಲೇ ಬೇಕು. ಅದಕ್ಕೆ ತಕ್ಕ ಸಂಧಿ ಸಿಕ್ಕಬೇಕು.

**ಮುಂಬಾಜಿ**—(**ಆಂಜನೇಯನ ಮುಂದೆ ಇದ್ದ ಭಕ್ಷ್ಯಗಳ ತಟ್ಟೆಯನ್ನು ತೆಗೆದುಕೊಂಡು ರಂಭೆಯೊಡನೆ ನಗುತ್ತ ಮಾತನಾಡುತ್ತ ಆ ಭಕ್ಷ್ಯಗಳನ್ನು ಅವಳಿಗೂ ಕೊಟ್ಟು ತಾನೂ ತಿನ್ನುತ್ತ ಕುಳಿತಿರುವನು.**)

**ತುಂಬಾಜಿ**—(**ಮರೆಯಿಂದ ನೋಡಿ ಆತ್ಮಗತ**) ಓಹೋ! ಇದೇ ಇರಬಹುದು ಇವರ ಕ್ರೂರವಾದ ಉಪವಾಸ ವ್ರತ! ಭಕ್ಷ್ಯಗಳ ತಟ್ಟೆಯನ್ನೂ ಸಹ ಬಿಡುವಂತೆ ಇಲ್ಲ.

(**ಪಂಡಿತರಾವ್ ಮತ್ತು ಹಿರೋಜಿ ಇವರು ಸೇವಕರ ಕೈಯಿಂದ ಕಾಣಿಕೆಯ ವಸ್ತುಗಳ ತಟ್ಟೆಗಳನ್ನು ಹೊರಿಸಿಕೊಂಡು ಬರುವರು.**)

**ಪಂಡಿತರಾವ್**—(**ತುಂಬಾಜಿಯನ್ನು ನೋಡಿ**) ಸ್ವಾಮಿಾ, ಗುರುಮಹಾರಾಜರು ಒಳಗಿದ್ದಾರೆಯೋ?

**ತುಂಬಾಜಿ**—(**ಆತ್ಮಗತ**) ಈಗ ನಾನು ಸ್ವಲ್ಪ ವಿನೋದವನ್ನು ಮಾಡಲೇಬೇಕು. (**ಪ್ರಕಾಶಂ**) ಮಹಾರಾಜರೇ? ಯಾವ ಮಹಾರಾಜರು? ಒಳಗೆ ದೇವಸ್ಥಾನದಲ್ಲಿ ಕುಳಿತಿರುವವನು ಆಂಜನೇಯ ಮಹಾರಾಜ! ಸ್ವಯಂಸಿದ್ಧ ಮಹಾರಾಜರು ನಮ್ಮ ಮಂಬಾಜೀ ಗುರುಮಹಾರಾಜರು, ಅವರ ಮುಖ್ಯ ಶಿಷ್ಯ ನಾನು ತುಂಬಾಜಿ ಮಹಾರಾಜ. ಈಗ ತಾನೇ ಒಳಗೆ ಹೋಗಿರುವವರು ರಂಭಾಜಿ ಮಹಾರಾಜರು. ಇಷ್ಟು ಮಂದಿಯಲ್ಲಿ ನಿಮಗೆ ಯಾವ ಮಹಾರಾಜರು ಬೇಕು?

**ಪಂಡಿತರಾವ್**—(**ಹಿರೋಜಿಯೊಡನೆ ಪ್ರತ್ಯೇಕವಾಗಿ**) ಹಿರೋಜಿ! ಈತನು ಹೇಳುವುದರಲ್ಲಿ ಏನೋ ವಿಚಿತ್ರವಿರುವಂತೆ ಕಾಣುವುದು! ನಾವು ತಿಳಿಯದೆ ಇದು ಮಹಾತ್ಮ ತುಕಾರಾಮರ ಸನ್ನಿಧಿಯೆಂದು ಇಲ್ಲಿಗೆ ಬಂದುಬಿಟ್ಟೆವಲ್ಲಾ! ಈಗ ಏನು ಮಾಡೋಣ?

**ಹಿರೋಜಿ**—ಪಂಡಿತರಾಯರೇ! ಇಲ್ಲಿನ ಸಮಾಚಾರವೇನೆಂಬುದನ್ನು ವಿವರವಾಗಿ ಉಪಾಯದಿಂದ ತಿಳಿದುಕೊಂಡೇ ಹೋಗುವುದುತ್ತಮವಲ್ಲವೇ?

**ಪಂಡಿತರಾವ್**—ನಿಜ. ಹಾಗೆಯೇ ಮಾಡೋಣ. (**ತುಂಬಾಜಿಯನ್ನು**

**ನೋಡಿ)** ಸ್ವಾಮಿಾ! ನಾವು ತಮ್ಮ ಸ್ವಯಂಸಿದ್ಧ ಗುರುಮಹಾರಾಜರ ದರ್ಶನ ಮಾಡುವುದಕ್ಕಾಗಿ ಬಂದಿರುತ್ತೇವೆ.

**ತುಂಬಾಜಿ**—ಹಾಗಾದರೆ ಸ್ವಲ್ಪ ಹೊತ್ತು ಇಲ್ಲಿಯೇ ಇರಿ. ನಾನು ನಮ್ಮ ಗುರುಮಹಾರಾಜರಿಗೆ ತಿಳಿಸಿ ಬರುತ್ತೇನೆ. **(ಮಂಬಾಜಿಯ ಬಳಿಗೆ ಬಂದು,)** ಗುರುಗಳೇ, ತಮ್ಮ ದರ್ಶನಾರ್ಥಿಗಳಾಗಿ ಭಕ್ತ ಜನರು ಬಂದಿದ್ದಾರೆ......

**ಮಂಬಾಜಿ**—**(ಕೋಪದಿಂದ)** ಭಕ್ತರ ಮನೆ ಹಾಳಾಗಲಿ! ನೀನು ಹೋಗಿ, "ನಮ್ಮ ಗುರುಮಹಾರಾಜರು ಬ್ರಹ್ಮಾನಂದದಲ್ಲಿ ಲೀನರಾಗಿದ್ದಾರೆ; ಯೋಗ ಸಮಾಧಿಯಲ್ಲಿ ಚಿನ್ಮಯಾವಸ್ಥೆಯಿಂದಿರುವ ಆ ಮಹನೀಯರ ದರ್ಶನ ಮಾಡಲು ಈಗ ಸಾಧ್ಯವಿಲ್ಲ," ಎಂದು ಹೇಳಿಬಿಡು, ಹೋಗು.

**ತುಂಬಾಜಿ**—**(ಆತ್ಮಗತ)** ಕೈಬಾಯಿಗಳಿಗೆ ಜಗಳ ಬಿಟ್ಟು ರಂಭೆಯೊಡನೆ ಫಲಹಾರಾವಸ್ಥೆಯಿಂದಿರುವರೆಂದು ಹೇಳಿಬಿಡಲೇ! **( ಪ್ರಕಾಶಂ )** ಸ್ವಾಮಿಾ ಗುರುಗಳೇ, ಅವರು ಬಹಳ ದೊಡ್ಡ ಬಹುಮಾನಗಳನ್ನೂ ಕಾಣಿಕೆಗಳನ್ನೂ ತಂದಿರುವರು.

**ಮಂಬಾಜಿ**—**(ಕೋಪದಿಂದ)** ಅವಿವೇಕೀ! ಹಾಗಾದರೆ ಮೊದಲೇ ಅದನ್ನು ನನ್ನೊಡನೆ ಏತಕ್ಕೆ ಹೇಳಲಿಲ್ಲವೋ? ಹೋಗು ಹೋಗು, ಬೇಗನೆ ಹೋಗಿ ಅವರನ್ನು ಮೊದಲು ಒಳಗೆ ಕರೆದುಕೊಂಡು ಬಾ.

**(ರಂಭೆಯನ್ನು ಮರೆಯಲ್ಲಿ ನಿಲ್ಲಿಸಿ, ಫಲಾಹಾರದ ತಟ್ಟೆಯನ್ನು ಮುಚ್ಚಿಟ್ಟು ಆಂಜನೇಯನ ಮುಂದೆ ಕೈಮುಗಿದು ಕಣ್ಮುಚ್ಚಿ ಕುಳಿತು,)**

ಜಯ ಮಹಾವೀರಾಂಜನೇಯ! ಜಯ ಮಾರುತಿ ಮಹಾರಾಜ!! ಮಹಾನುಭಾವಾ! ನಮಗೆ ಲಕ್ಷಾಧಿಕಾರಿಯೂ ಭಿಕ್ಷಾಧಿಕಾರಿಯೂ ಇಬ್ಬರೂ ಒಂದೇ! **(ಭಕ್ತರು ಬರುವುದನ್ನು ನೋಡಿ)** ಆಂಜನೇಯಾ! ನಿನ್ನ ಕೃಪೆಯೊಂದಿದ್ದರೆ ಸಾಕು! ನಿಸ್ಸಂಗಿಗಳಾದ ನಮಗೆ ಯಾರಿಂದೇನಾಗಬೇಕು! ಯಾರ ಗೊಡವೆಯೇನು ಬೇಕು! ಆದರೂ ನಿನ್ನ ಸಂಕಲ್ಪವಿರುವವರೆಗೂ ನಾವು ಈ ಪಾಪಿ ಪ್ರಪಂಚದಲ್ಲಿ ಕಾಲವನ್ನು ಕಳೆಯಬೇಕಾಗಿದೆ! ಮಾಡುವುದೇನು!

**ಪಂಡಿತರಾವ್ ಮತ್ತು ಹಿರೋಜಿ**—(ಬಂದು ನಮಸ್ಕರಿಸಿ ನಿಂತಿರುವರು.)

**ಮಂಬಾಜಿ**—(ನೋಡಿ) ಆಂಜನೇಯನು ನಿಮಗೆ ಮಂಗಳವನ್ನುಂಟು ಮಾಡಲಿ. ಬನ್ನಿ ಕುಳಿತುಕೊಳ್ಳಿ. ತುಂಬಾಜೀ, ಇವರುಗಳಿಗೆ ಪೀಠಗಳನ್ನು ತಂದುಹಾಕು.

**ತುಂಬಾಜಿ**—(ಆತ್ಮಗತ) ರಂಭೆಗೆ ಹೇಳಬೇಕಾಗಿತ್ತು! (ಪ್ರಕಾಶಂ) ಅಪ್ಪಣೆ. (ಪೀಠಗಳನ್ನು ತಂದುಹಾಕುವನು.)

**ಮಂಬಾಜಿ**—ಎಲೈ, ನೀವು ಯಾರು? ಎಲ್ಲಿಂದ ಬಂದಿರಿ? ನಿಮ್ಮ ಉದ್ಯೋಗವೇನು? ಇಲ್ಲಿಗೆ ಬರಲು ಕಾರಣವೇನು? ನಮ್ಮಿಂದ ನಿಮಗಾಗಬೇಕಾದುದೇನು? ಇಲ್ಲಿಗೆ ಯಾವಾಗ ಬಂದಿರಿ? ನಿಮ್ಮನ್ನು ಕಳುಹಿಸಿದವರು ಯಾರು? ನಿಮಗೆಲ್ಲರಿಗೂ ಕುಶಲವೇ?

**ತುಂಬಾಜಿ**—(ಆತ್ಮಗತ) ಅಬ್ಬಬ್ಬಬ್ಬಬ್ಬಾ! ಅದೆಷ್ಟೊಂದು ಪ್ರಶ್ನೆಗಳು! ಏನು ಕಥೆ! ಒಂದೇ ಉಸಿರಿಗೆ ಹಾಕಿದ ಇಷ್ಟು ಪ್ರಶ್ನೆಗಳಿಗೆ ಉತ್ತರ ಹೇಳಲು ಆ ಹತ್ತು ತಲೆಯ ರಾವಣಾಸುರನೇ ಬರಬೇಕು.

**ಪಂಡಿತರಾವ್**—ಸ್ವಾಮಿಾ, ನಾವು ಪೂನಾ ನಗರದವರು, ಗುರು ಮಹಾರಾಜರಾದ ತಮ್ಮ ಕೀರ್ತಿಯನ್ನು ಕೇಳಿ ತಮ್ಮ ಸಂದರ್ಶನ ಮಾಡಬೇಕೆಂಬ ಕುತೂಹಲ ಹುಟ್ಟಿ ತಮ್ಮ ಸನ್ನಿಧಿಗೆ ಬಂದೆವು.

**ಮಂಬಾಜಿ**—ಆಹಾ! ಕುತೂಹಲ ಹುಟ್ಟಬೇಕಾದುದೇ! ಬಹಳ ಸಂತೋಷ! ನಾವು ಸರ್ವಸಂಗ ಪರಿತ್ಯಾಗಮಾಡಿ ನಿರಾಶರಾಗಿದ್ದರೂ ನಮ್ಮ ಕೀರ್ತಿಯು ಪೂನಾ ಪ್ರಾಂತದಲ್ಲಿಯೂ ವಿಸ್ತರಿಸಿರುವುದಲ್ಲವೇ?

**ಪಂಡಿತರಾವ್**—ಮಹಾಸ್ವಾಮಿಾ, ಪೂನಾ ಪ್ರಾಂತವು ಮಾತ್ರವಲ್ಲದೆ ಸೋಲಾಪುರ ಪ್ರಾಂತದಲ್ಲಿಯೂ ಸಹ ಮಹಾತ್ಮ ತುಕಾರಾಮ ಸಾಧು ಮಹಾರಾಜರ ಕೀರ್ತಿಯು ಎಲ್ಲೆಲ್ಲಿಯೂ ತುಂಬಿರುವುದು.

**ಮಂಬಾಜಿ**—(ಆತ್ಮಗತ) ಅವನ ಕೀರ್ತಿಗೂ ನಿಮ್ಮ ಮುಖಗಳಿಗೂ ಬೆಂಕಿ ಹಾಕಬೇಕು. (ಪ್ರಕಾಶಂ) ಓಹೋ! ಏನಿರಯ್ಯಾ? ಹಾಗಾದರೆ ಮತ್ತೊಬ್ಬ ಮಹಾ ವೈರಾಗ್ಯಶಾಲಿಯೂ ಮಹಾ ತಪಸ್ವಿಯೂ ಆದ

ಮಹನೀಯ ಸಾಧುವರ್ಯನ ನಿರ್ಮಲ ಕೀರ್ತಿಯು ಈವರೆಗೂ ನಿಮ್ಮ ಕಿವಿಗೆ ಬೀಳಲಿಲ್ಲವೋ ?

**ಹಿರೋಜಿ**—ಅದೇತಕ್ಕೆ ಬೀಳಲಿಲ್ಲ ! ಲೋಕಮಾನ್ಯರೂ ಮಹಾ ತಪೋಮಹಿಮರೂ ಆದ......ಶ್ರೀ ಸಮರ್ಥ ರಾಮದಾಸ ಸ್ವಾಮಿಗಳವರ ಅದ್ಭುತ ಕೀರ್ತಿಯು ಚತುರ್ದಿಕ್ಕುಗಳನ್ನೂ ಬೆಳಗುತ್ತಿರುವುದಲ್ಲಾ !

**ಮಂಬಾಜಿ**—( **ಕೋಪದಿಂದ ಆತ್ಮಗತ** ) ಆ ಕೌಪೀನ ಸನ್ಯಾಸಿಯನ್ನು ಹೊಗಳುತ್ತಿರುವರಲ್ಲದೆ ಈ ನೀಚರು ನನ್ನ ಹೆಸರನ್ನೇ ಎತ್ತಲಿಲ್ಲವಲ್ಲಾ! (**ಪ್ರಕಾಶಂ**) ಏನಿರಯ್ಯಾ ! ನೀವು ಇತರ ಸಾಧುಗಳನ್ನು ಹೊಗಳಲು ಬಂದಿರೋ ಅಥವಾ ಯಾರನ್ನಾದರೂ ನೋಡುವುದಕ್ಕೆ ಬಂದಿರೋ ?

**ಪಂಡಿತರಾವ್**—ನಾವೇನೋ ಮಹಾತ್ಮರಾದ ತುಕಾರಾಮ ಗುರು ಮಹಾರಾಜರ ಸಂದರ್ಶನಕ್ಕಾಗಿ ಬಂದೆವು.

**ಮಂಬಾಜಿ**—ಏನು ? ಏನೆಂದು ಹೇಳಿದಿರಿ ? ( **ಮಹಾ ಕೋಪದಿಂದ** ) ಈ ಮಹಾನುಭಾವನೂ ಮಹಾ ತಪಸ್ವಿಯೂ ಆದ ಮಂಬಾಜಿ ಸಾಧು ಮಹಾರಾಜನ ಮುಂದೆ ಆ ಅಲ್ಪನೂ ಅಜ್ಞನೂ ಠಕ್ಕನೂ ಆದ ಆ ತುಕ್ಕನನ್ನು ಮಹಾತ್ಮನೆಂದು ಹೊಗಳಿ ನಮಗವಮಾನ ಮಾಡಲು ಬಂದಿರಾ ? ಮೂರ್ಖರಿರಾ ! ( **ಕೈಗೆ ಉದಕವನ್ನು ಹಾಕಿಕೊಂಡು** ) ಆಂಜನೇಯಾ ! ಅನ್ಯಾಯ ಪಕ್ಷಪಾತಿಗಳಾದ ಇವರಿಗೆ.........

**ತುಂಬಾಜಿ**—( **ಪಂಡಿತರಾಯರನ್ನು ನೋಡಿ ಕಾತರ ನಟನೆಯಿಂದ** ) ಸ್ವಾಮೀ ! ಸ್ವಾಮೀ ! ಮೊದಲು ನಮಸ್ಕರಿಸಿ ಕ್ಷಮೆಯನ್ನು ಬೇಡಿಕೊಳ್ಳಿ ; ನೀವು ತಿಳಿದೂ ತಿಳಿದೂ ಇಂತಹ ಕಾರ್ಯ ಮಾಡಬಹುದೇ ? ಆಹಾ ! ಎಂತಹ ಅನರ್ಥವನ್ನು ತಂದುಕೊಂಡಿರಿ ? ಲೋಕಪ್ರಸಿದ್ಧ, ಲೋಕಮಾನ್ಯ, ಮಹಾಸಿದ್ಧ, ಮಹಾಪುರುಷ ಶ್ರೀ ಸಮರ್ಥ ಮಂಬಾಜೀ ಗುರು ಮಹಾರಾಜರೆಂದು ಯಾವ ಮಹನೀಯರನ್ನು ಲೋಕವೇ ಹೊಗಳುತ್ತಿರುವುದೋ ಆ ಪುಣ್ಯಮೂರ್ತಿಯೇ ಈ ವ್ಯಕ್ತಿ ವಿಭೂತಿಯು ! ತಿಳಿಯಿತೇ ? ಅವರ ಬಾಯಿಂದ ಶಾಪೋಚ್ಚಾರಣೆಯಾಗುವುದಕ್ಕೆ

ಮೊದಲೇ ಅವರಿಗೆ ಶರಣಾಗತರಾಗಬೇಕು ! ಇಲ್ಲವಾದರೆ ನಿಮ್ಮ ಗತಿ ಯೇನಾಗುವುದೋ ಕಾಣೆನೇ ! ಇನ್ನೇನು ಗತಿ !!

**ಪಂಡಿತರಾವ್**—ಓಹೋ ! ಇದು ನಿಜವೇನು ? ಹಾಗಾದರೆ ಇಂತಹ ಮಹಾನುಭಾವರ ಸಂದರ್ಶನವು ಲಭಿಸಿದುದು ನಮ್ಮ ಭಾಗ್ಯ. (**ಮುಂಬಾಜಿಯನ್ನು ನೋಡಿ**) ಮಹಾಸ್ವಾಮಿ, ಕ್ಷಮಿಸಬೇಕು ! ತಾವೇ ತುಕಾರಾಮರೆಂದು ನಾವು ಭ್ರಾಂತರಾದೆವು. ಇದು ಅಪರಾಧ ವಾಯಿತು. ಶಾಂತರಾಗಬೇಕು.

**ತುಂಬಾಜಿ**—(**ಆತ್ಮಗತ**) ಆಹಾ ! ಅಪರಾಧವಲ್ಲವೇ ! ದೆವ್ವವನ್ನು ದೇವ ರೆಂದಷ್ಟು ತಪ್ಪಾಯಿತು ! ಇದು ಸಾಮಾನ್ಯವಾದ ಅಪರಾಧವೇ !

**ಮುಂಬಾಜಿ**—(**ಕ್ರೋಧವನ್ನಳಿಸಿಕೊಂಡು**) ನಮ್ಮ ಆಂಜನೇಯನ ಸನ್ನಿಧಿಯ ಮಹಿಮೆಯಿಂದ ನಿಮಗೆ ಬೇಗನೆ ಅರಿವುಂಟಾಯಿತು ; ಇಲ್ಲವಾಗಿದ್ದರೆ ಅನರ್ಥವೇ ಆಗುತ್ತಿತ್ತು.

(**ಮರೆಯಲ್ಲಿದ್ದ ರಂಭೆಯು ಆಕಸ್ಮಿಕವಾಗಿ ಪಂಡಿತರಾಯನಿಗೆ ಗೋಚರವಾಗುವಳು. ಆತನು ಸಂಜ್ಞೆಯಿಂದ ಅವಳನ್ನು ಹಿರೋಜಿಗೆ ತೋರಿಸಲು ಇಬ್ಬರೂ ಪರಸ್ಪರ ಮುಖಗಳನ್ನು ನೋಡಿಕೊಳ್ಳುವರು.**)

**ಮುಂಬಾಜಿ**—ಈಗ ಈ ಶಾಪೋದಕವನ್ನು ನಾನೇ ಕುಡಿಯ ಬೇಕಾ ಯಿತು. ನೆಲದ ಮೇಲೆ ಹಾಕಿದರೂ ನೆಲವು ಬೆಂದು ಭಸ್ಮವಾಗುವುದು. (**ಕೈಯಲ್ಲಿದ್ದ ನೀರನ್ನು ಕುಡಿದು**) ಎಲೈ ಕೇಳಿ, ನಾವು ವೀರಾಂಜನೇಯನ ಭಕ್ತರು, ಮಹಾ ತಪಸ್ವಿಗಳು ; ಅಗ್ನಿಜ್ವಾಲೆಗಿಂತಲೂ ನಮ್ಮ ಕೋಪ ಜ್ವಾಲೆಯು ಪ್ರಬಲವಾದುದು. ನಾವಾದರೋ ಮಹಾತಪೋ ನಿಷ್ಠನಾದ ಆ ವಿಶ್ವಾಮಿತ್ರ ಮಹರ್ಷಿಗಳಿಗಿಂತಲೂ ಉಗ್ರ ತಪಸ್ವಿ ಗಳು ! ಆದರೆ ನಮ್ಮ ಮಹತ್ತ್ವವನ್ನು ನಾವೇ ಹೊಗಳಿಕೊಳ್ಳಬಾರದು.

**ತುಂಬಾಜಿ**—ಗುರುಗಳೇ, ಆ ವಿಷಯವನ್ನು ತಾವೇತಕ್ಕೆ ಹೇಳಬೇಕು ! ತಮ್ಮ ಯೋಗ್ಯತೆಯೆಲ್ಲವೂ ಅವರಿಗೆ ಕ್ರಮಕ್ರಮವಾಗಿ ತಾನಾಗಿಯೇ ವ್ಯಕ್ತವಾಗುತ್ತಿರುವುದು.

**ಮಂಬಾಜಿ**—ನಿಜ! ಸಂದೇಹವೇನು!

**ಪಂಡಿತರಾವ್**—ಸ್ವಾಮಿಾ, ನಮ್ಮ ಅಪರಾಧಗಳನ್ನು ಮನ್ನಿಸಿ ಈ ಕಾಣಿಕೆಯನ್ನು ಪರಿಗ್ರುಹಿಸಬೇಕೆಂದು ಪ್ರಾರ್ಥಿಸಿಕೊಳ್ಳುತ್ತೇವೆ.

**ಮಂಬಾಜಿ**—ಏತಕ್ಕೆ? ಆಂಜನೇಯನ ಕೃಪೆಯಿಂದ ನಮಗೆ ಯಾವುದಕ್ಕೂ ಕಡಿಮೆಯಿಲ್ಲ. ಅಣಿಮಾದ್ಯಷ್ಟ ಸಿದ್ಧಿಗಳೂ ನಮ್ಮೆದುರಲ್ಲಿ ಕೈಮುಗಿದು ನಮ್ಮಾಜ್ಞೆಯನ್ನು ನಿರೀಕ್ಷಿಸಿಕೊಂಡು ನಿಂತಿರುವುವು. ಹೀಗಿರುವಲ್ಲಿ ನಮಗೇನು ತಾನೇ ಆಗಬೇಕಾಗಿದೆ? ಆದರೆ ಬಹುದೂರದಿಂದ ಬಂದ ನಿಮ್ಮ ಮನಸ್ಸಿಗೆ ವಿಷಾದವಾಗಬಾರದೆಂದು ನಾವು ಈ ಕಾಣಿಕೆಗಳನ್ನು ಸ್ವೀಕರಿಸಬೇಕಾಗಿದೆ. ಇರಲಿ, ಏನು ಮಾಡುವುದು?

**ಪಂಡಿತರಾವ್**—ಸ್ವಾಮಿಾ, ಈ ಕಾಣಿಕೆಗಳನ್ನು ನಮ್ಮ ಛತ್ರಪತಿ ಶಿವಾಜಿ ಮಹಾರಾಜರು ಕಳುಹಿಸಿದ್ದಾರೆ. ನಾವು ಆತನ ಮಂತ್ರಿ ಸೇನಾನಿಗಳು. ಈತನ ಹೆಸರು ಹಿರೋಜಿ ನಾಯಕನು.

**ಹಿರೋಜಿ**—ಇವರು ಪ್ರಧಾನ ಪಂಡಿತರಾಯರು.

**ಮಂಬಾಜಿ**—(**ಸಂತೋಷದಿಂದ**) ಏನು? ಶಿವಾಜಿ ಮಹಾರಾಜರೇ? ಛತ್ರಪತಿ ಶಿವಾಜೀ ಮಹಾರಾಜರು!! ಭಲಾ! ಆ ಶಿವಾಜೀ ಮಹಾರಾಜರಿಗೆ ನಮ್ಮಂತಹ ಸಾಧುಗಳ ಪಾದಕಮಲಗಳಲ್ಲಿ ಭಕ್ತಿಯು ಬಹಳ ಚೆನ್ನಾಗಿದೆ. ಇದನ್ನು ಕೇಳಿ ನಮಗೆ ಬಹಳ ಸಂತೋಷವಾಯಿತು. ಇದು ಮಹಾ ಪ್ರಭಾವವುಳ್ಳ ದೇವಾಲಯವೆಂತಲೂ, ಅವರು ನಮ್ಮ ಆಂಜನೇಯನಲ್ಲಿ ಪರಿಪೂರ್ಣ ಭಕ್ತಿಯಿಂದಿರಬೇಕೆಂತಲೂ ನಿಮ್ಮ ಶಿವಾಜೀ ಮಹಾರಾಜರಿಗೆ ತಿಳಿಸಿ, ಶ್ರೀಮದಾಂಜನೇಯಸ್ವಾಮಿಯು ಸದಾ ನಿಮ್ಮ ರಕ್ಷಣಾಸಕ್ತಿಯಿಂದಿರುವನೆಂದು ಹೇಳಿರಿ. ಅಲ್ಲದೆ ಆದಷ್ಟು ಕ್ಷಿಪ್ರದಲ್ಲಿ ಬಂದಾವೃತ್ತಿ ನಮ್ಮ ಆಂಜನೇಯನ ದರ್ಶನಕ್ಕಾಗಿ ಬರಬೇಕೆಂದು ನಾವು ಆಶೀರ್ವಾದಮಾಡಿ ಆಜ್ಞಾಪಿಸಿದೆವೆಂಬದಾಗಿ ನಿಮ್ಮ ಮಹಾರಾಜರಿಗೆ ತಿಳಿಸಬೇಕು. ತಿಳಿಯಿತೇ?

**ಹಿರೋಜಿ**—ತಿಳಿಯಬೇಕಾದ ವಿಷಯಗಳೆಲ್ಲವೂ ತಿಳಿದಂತಾಯಿತು.

**ಪಂಡಿತರಾವ್**—ಇನ್ನು ಅಪ್ಪಣೆಯಾದರೆ ಹೋಗಿ ಬರುತ್ತೇವೆ.

**ಮುಂಬಾಜಿ**—ಆಗಬಹುದು, ಹೊರಡಿ. ತುಂಬಾಜೀ! ಇವರಿಗೆ ಸ್ವಲ್ಪ ದೇವರ ಪ್ರಸಾದವನ್ನು ಕೊಡು.

**ತುಂಬಾಜಿ**—ಸ್ವಲ್ಪವೇಕೆ! ಹೆಚ್ಚಾಗಿಯೇ ಕೊಡುವೆನು. (**ನಿರ್ಮಾಲ್ಯ ವನ್ನು ಕೊಡುವನು.**)

**ಪಂಡಿತರಾವ್**—(**ಹೊರಟು ಪಕ್ಕಕ್ಕೆ ಬಂದು**) ಎಲವೋ ದುರಾತ್ಮಾ, ನಿನ್ನ ಈ ಕಪಟ ಸಂನ್ಯಾಸಿತ್ವವನ್ನು ಕ್ಷಿಪ್ರದಲ್ಲಿಯೇ ಬಯಲುಮಾಡಿ ನಿನಗೆ ತಕ್ಕುದನ್ನು ಮಾಡುವೆವು. (**ಹೋಗುವರು.**)

**ತುಂಬಾಜಿ**—(**ಒಡವೆಗಳಿರುವ ಕಾಣಿಕೆಯ ತಟ್ಟೆಯನ್ನು ತೆಗೆದುಕೊಂಡು,**) ಗುರುಗಳೇ ಈ ಆಭರಣಗಳನ್ನು ಆಂಜನೇಯನಿಗಲಂಕರಿಸಲೇ?

**ಮುಂಬಾಜಿ**—(**ಬೇಗನೆ ಅವನ ಕೈಯಿಂದ ತಟ್ಟೆಯನ್ನು ಕಿತ್ತುಕೊಂಡು**) ಎಲವೋ! ಎಂತಹ ಮೂರ್ಖನೋ ನೀನು! ಆಂಜನೇಯನು ಬ್ರಹ್ಮ ಚಾರಿಯು; ನಿರಾಶಾ ಚಿತ್ತನು. ಅವನಿಗೇತಕ್ಕೆ ಈ ಒಡವೆಗಳು? (**ಪಕ್ಕಕ್ಕೆ ನೋಡಿ**) ರಂಭೇ! ಹೀಗೆ ಬಾ! ಅವರು ಹೊರಟು ಹೋದರು.

**ರಂಭೆ**—(**ಪ್ರವೇಶಿಸಿ ಸಂತೋಷದಿಂದ**) ಇವೆಲ್ಲವೂ ಯಾರಿಗೆ ಗುರುಗಳೇ?

**ಮುಂಬಾಜಿ**—ಮತ್ತೆ ಯಾರಿಗೆ! ನನಗೆ, ನಿನಗೆ; ನೋಡು ಎಂತಹ ಆಭರಣಗಳು! ಎಂತಹ ವಸ್ತ್ರಗಳು; ಎಂತಹ ಕಾಣಿಕೆ!

**ತುಂಬಾಜಿ**—ಇದೆಲ್ಲವೂ ಆಂಜನೇಯನ ಪ್ರಭಾವವಲ್ಲವೇ ಗುರುಗಳೇ!

**ಮುಂಬಾಜಿ**—ಅಯೋಗ್ಯಾ! ನಾನಿಲ್ಲದಿದ್ದರೆ ನಿಮ್ಮ ಆಂಜನೇಯನಿಗೆ ಯಾರು ಕಾಣಿಕೆಗಳನ್ನೊಪ್ಪಿಸುತ್ತಿದ್ದರು! ಇದು ಆಂಜನೇಯನ ಪ್ರಭಾವವಲ್ಲ. ನನ್ನ ಪ್ರಭಾವ! ಈ ಮುಂಬಾಜಿ ಸಾಧು ಮಹಾ ರಾಜನ ಪ್ರಭಾವ!! (**ರಂಭೆಯನ್ನು ನೋಡಿ**) ರಂಭೇ! (**ಒಡವೆಗಳನ್ನ ವಳಿಗೆ ತೋರಿಸುವನು.**) (**ರಂಭೆಯು ಕೆಲವನ್ನು ಮುಂಬಾಜಿಗೆ ಧರಿಸುವಳು.**)

**ತುಂಬಾಜಿ**—ಗುರುಗಳೇ! ಇದು ಆಂಜನೇಯನ ಪ್ರಭಾವವೂ ಅಲ್ಲ! ತಮ್ಮ ಮಹಿಮೆಯೂ ಅಲ್ಲ; ರಂಭೆಯ ಪುಣ್ಯ!

**ಮಂಬಾಜಿ**—ನಿಜ. ರಂಭೆಯು ಪುಣ್ಯವಂತಳಾದುದರಿಂದಲೇ ನಮ್ಮ ಶಿಷ್ಯಳಾದುದು.

**ತುಂಬಾಜಿ**—(**ಆತ್ಮಗತ**) ಸತ್ಯವಾದ ಮಾತು! (**ಪ್ರಕಾಶಂ**) ಗುರುಗಳೇ! ಈಗ ನನಗೊಂದು ಸಂದೇಹವುಂಟಾಗಿದೆಯಲ್ಲಾ!

**ಮಂಬಾಜಿ**—ಏನು? ಸಂದೇಹವೇನು?

**ತುಂಬಾಜಿ**—"ಆಂಜನೇಯನು ಬ್ರಹ್ಮಚಾರಿಯು! ನಿರಾಶಾ ಚಿತ್ತನು! ಆತನಿಗೆ ಒಡವೆಗಳೇತಕ್ಕೆ!" ಎಂದು ಅಪ್ಪಣೆ ಕೊಡಿಸಿದಿರಲ್ಲವೇ! ತಾವು ಬ್ರಹ್ಮಚಾರಿಗಳಲ್ಲವೇ! ವಿರಕ್ತರಲ್ಲವೇ?

**ಮಂಬಾಜಿ**—ಕೇಳು! ನಾವು ರಾಜಯೋಗಿಗಳು! ಹೇಗೆ ತ್ಯಾಗಿಗಳೋ ಹಾಗೆಯೇ ಭೋಗಿಗಳೂ ಅಹುದು. ಆದುದರಿಂದ ನಾವು ಭಿಕ್ಷುಕರಾಗಿಯೂ ಇರಬಹುದು, ಲಕ್ಷಕರಾಗಿಯೂ ಇರಬಹುದು. ಅವೆಲ್ಲವೂ ದೊಡ್ಡ ವಿಚಾರಗಳು, ನಿನಗೇಕೆ! ಸುಮ್ಮನೆ ಹೊರಗೆ ಹೋಗು; ಯಾರಾದರೂ ತಟ್ಟನೆ ಒಳಗೆ ಬಂದುಬಿಟ್ಟಾರು.

**ತುಂಬಾಜಿ**—ನಿಜ ಗುರುಗಳೇ! ಇಂತಹ ದೊಡ್ಡ ವಿಚಾರಗಳು ನನಗೆ ಬೇಕಿಲ್ಲ. (**ಹೊರಗೆ ಹೋಗುವನು.**)

**ಮಂಬಾಜಿ**—ರಂಭೇ! ನೋಡಿದೆಯೋ! ನಮ್ಮ ಆಂಜನೇಯನು ನಿನಗೆ ಕೊಟ್ಟ ಸಂದೇಶವನ್ನು ನಡೆಯಿಸಲು ಎಂತಹ ಶುಭಶಕುನ ಒದಗಿರುವುದು! ತುಕ್ಕನನ್ನು ಭಂಗಪಡಿಸಬೇಕೆಂದು ಪ್ರಯತ್ನಿಸುವ ಆರಂಭದಲ್ಲಿಯೇ ನಮಗೆಂತಹ ಗೌರವವೂ ಪ್ರಯೋಜನವೂ ಒದಗಿರುವುದು! ಇನ್ನು ಬೇಗನೆ ನೀನು ಆ ಅಯೋಗ್ಯ ತುಕ್ಕನ ಬಳಿಗೆ ಹೋಗಿ ನಿನ್ನ ಚಾತುರ್ಯದಿಂದ ಅವನ ಮಾನವನ್ನು ಕಳೆದು ಅವನನ್ನು ಕಾಸಿಗೆ ಕಡೆಮಾಡಿ ಜಯಶಾಲಿಯಾಗಿ ಬರಬೇಕು. ಇದರಿಂದ ನಿನಗೆ ಇಂದ್ರಲೋಕ ಪ್ರಾಪ್ತಿಯಾಗುವುದು. ತಿಳಿಯಿತೇ?

**ರಂಭೆ**—ತಿಳಿಯಿತು ಗುರುಗಳೇ! ಬಹಳ ಸಂತೋಷ; ಇದೋ ಹೊರಟೆ!

ಕಂ॥ ಮೃದು ಗಾನ ನಟನ ಚಾತುರ್ಯ-
ದೆ ಬೀರುತೆ ಮೋಹಪಾಶವಂ ಕಡೆಗಣ್ಣಿಂ ||
(೧೫) ಕೆದರುತೆ ಸುಮುಶರವಂ ವಿಧ-
ವಿಧದೆ ತುಕಾರಾಮು ಸಾಧುವಂ ಭಂಗಿಸುವೆಂ ||೧೨||

ಮಂಬಾಜಿ—ಕೃತಕಾರ್ಯಳಾಗಿ ಬಾ, ಹೊರಡು. (ರಂಭೆ ಹೋಗುವಳು.) (ಆತ್ಮಗತ) ಲೋಕದಲ್ಲಿ ಅವಿವೇಕಿಗಳು ಹೆಚ್ಚಾಗಿರುವುದರಿಂದ ಬುದ್ಧಿಶಾಲಿಗಳಾದವರು ಈ ಸಾಧು ವೃತ್ತಿಯನ್ನವಲಂಬಿಸಿದರೆ ಮೂಲಧನವಿಲ್ಲದೆಯೇ ಸುಲಭವಾಗಿ ದ್ರವ್ಯಾರ್ಜನೆ ಮಾಡಬಹುದು. ಆಹಾ ನನ್ನ ಯುಕ್ತಿಯೇ ಯುಕ್ತಿ! ನನ್ನ ವೃತ್ತಿಯೇ ವೃತ್ತಿ. ನಾನೀ ಸಾಧು ವೃತ್ತಿಯನ್ನವಲಂಬಿಸದೆ ಇದ್ದರೆ ನನಗೆ ಇಂತಹ ಅಮೂಲ್ಯಾಭರಣಗಳೂ ಇಷ್ಟು ಧನವೂ ಕೀರ್ತಿಯೂ ಲಭಿಸುತ್ತಿದ್ದುವೇ! ರಾಜನೂ ನನ್ನ ಪಾದಸೇವಕನಾಗುತ್ತಿದ್ದನೇ! ಭಲಾ! ನನ್ನ ಯುಕ್ತಿಯೇ ಯುಕ್ತಿ! ನನ್ನ ಅದೃಷ್ಟವೇ ಅದೃಷ್ಟ!

ತುಂಬಾಜಿ—(ಭಯಾತುರಗಳಿಂದ ಓಡಿಬಂದು) ಗುರುಗಳೇ! ಏಳಿ, ಏಳಿ, ಓಡಿ, ಓಡಿ, ಎಲ್ಲಿಯಾದರೂ ಅಡಗಿಕೊಳ್ಳಿ! ರಾಜಭಟರು ಊರಿನ ಎಲ್ಲ ಕಡೆಗಳಲ್ಲಿಯೂ ಸಾಧುಗಳನ್ನು ಹುಡುಕುತ್ತ ಬರುತ್ತಿರುವರು!

ಮಂಬಾಜಿ—ಅಯ್ಯೋ! ಮೂರ್ಖಾ! ಇದಕ್ಕೆ ಇಷ್ಟು ಭಯಪಡಬೇಕೇ! ಅವರನ್ನಿಲ್ಲಿಗೇತಕ್ಕೆ ಕರೆತರಲಿಲ್ಲ? ಅವರು ನಮಗೆ ಪಾದಪೂಜೆ ಮಾಡಲು ಬರುತ್ತಿರಬಹುದು.

ತುಂಬಾಜಿ—(ಆತ್ಮಗತ) ನಿಮಗೆ ಪಾದಗಳಿಂದಲೇ ಪೂಜೆಮಾಡುವರು. (ಪ್ರಕಾಶಂ) ಗುರುಗಳೇ, ಆಯುಧಗಳನ್ನೂ ಕೋರಡಗಳನ್ನೂ ಹಿಡಿದು ಸಾಧುಗಳನ್ನು ಶಿಕ್ಷಿಸಲು ಬರುತ್ತಿದ್ದಾರೆ ಗುರುಗಳೇ!

ಮಂಬಾಜಿ—(ಭೀತಿಯಿಂದ) ಎಲ ಎಲಾ! ಇದು ನಿಜವೇನೋ?

ತುಂಬಾಜಿ—ತಮ್ಮಲ್ಲಿ ಸುಳ್ಳು ಹೇಳುವೆನೇ ಗುರುಗಳೇ?

ಮಂಬಾಜಿ—ಅಯ್ಯಯ್ಯೋ! ಇನ್ನೇನು ಗತಿ! ಎಲವೋ ತುಂಬಾಜೀ,

ಅವರು ಹೀಗೆ ಸಾಧುಗಳನ್ನು ಶಿಕ್ಷಿಸಲು ಬರಲು ಕಾರಣವೇನೋ?

**ತುಂಬಾಜಿ**—ಏನೆಂದರೆ, ಈ ಕಾಲದ ಸಾಧುಗಳೂ ಸಂನ್ಯಾಸಿಗಳೂ ಬಹಳ ಮೋಸಗಾರರಂತೆ, ಉಪವಾಸದ ನೆಪದಿಂದ ಫಲಭಕ್ಷ್ಯಗಳನ್ನು ಒಳಗೊಳಗೇ ನುಂಗುತ್ತಾರಂತೆ, ಸಾಧುಗಳೆಂದು ಹೇಳಿಕೊಂಡು ವಸ್ತ್ರಾಭರಣಗಳನ್ನು ಧರಿಸಿಕೊಂಡು ಮೆರೆಯುತ್ತಾರಂತೆ, ಬ್ರಹ್ಮಚಾರಿಗಳೆಂದು ಹೇಳಿಕೊಂಡು ದುರಾಚಾರವಮಾಡುತ್ತ ಆಪ್ತನಾಯಿಕೆಯರಲ್ಲಿ ಅಂತರಂಗ ಪ್ರೀತಿಯಿಂದ ವರ್ತಿಸುತ್ತಾರಂತೆ!

**ಮಂಬಾಜಿ**—(**ಕೋಪದಿಂದ**) ಭಕ್ತಾದಿಗಳು ಅರ್ಪಿಸಿದ ವಸ್ತ್ರಾಭರಣಗಳನ್ನು ಧರಿಸುವುದಕ್ಕೂ, ಭಕ್ತ ಭಕ್ತೆಯರನ್ನು ಅನುಗ್ರಹಿಸಿ ಇಷ್ಟಾರ್ಥಗಳನ್ನು ಕೊಡುವುದಕ್ಕೆ ಯಾರ ಅಟಂಕವೇನು?

**ತುಂಬಾಜಿ**—ಆ ಟಂಕವೋ! ಈ ಟಂಕವೊ! ಸದ್ಯಕ್ಕೆ ನಿಮ್ಮ ಟೊಂಕ ಮುರಿಯದಂತೆ ನೋಡಿಕೊಳ್ಳಿ. (**ನೋಡಿ**) ಅಯ್ಯಯ್ಯೋ! ಬಂದೇ ಬಿಟ್ಟರಲ್ಲಾ! ಇನ್ನೇನು ಗತಿ! (**ಓಡಿ ದೇವರ ಬಳಿಯಲ್ಲಿ ಅಡಗುವನು.**)

**ಮಂಬಾಜಿ**—(**ನೋಡಿ**) ಅಯ್ಯೋ, ಇವರು ಮ್ಲೇಚ್ಛರು! ಎಲವೋ ಕತ್ತೆ! "ಇದು ಪವಿತ್ರವಾದ ಹಿಂದುಗಳ ದೇವಾಲಯವು; ಇದರೊಳಕ್ಕೆ ಮ್ಲೇಚ್ಛರು ಪ್ರವೇಶಿಸಕೂಡದು," ಎಂದು ಹೇಳು, ಹೋಗೋ. (**ಕೈಹಿಡಿದು ಮುಂದಕ್ಕೆಳೆಯುವನು.**) ಅಯ್ಯೋ! ಅಪ್ಪಾ! ಬಂದೇ ಬಿಟ್ಟರು, ಎಲ್ಲಿ ಹೋಗಲಿ! ಎಲ್ಲಿ ಅಡಗಲಿ!

**(ಪಂಡಿತರಾವ್ ಮತ್ತು ಹಿರೋಜಿ, ಮಹಮ್ಮದೀಯರ ವೇಷದಿಂದ ಆಯುಧಪಾಣಿಗಳಾಗಿ ಪ್ರವೇಶಿಸುವರು.)**

**ಪಂಡಿತರಾವ್**— ಹೋಗುವುದೆಲ್ಲಿಗೆ? ನಿಲ್ಲು! ಎಲ್ಲಿ? ಈ ಮಠದ ಅಧಿಕಾರಿ ಯಾರು? ತೋರಿಸು, ಮೊದಲು ತೋರಿಸು.

**ಮಂಬಾಜಿ**—ತೋರಿಸುವೆನು ಸ್ವಾಮಿಾ! ತೋರಿಸುವೆನು. ಇದೋ, ಇದೋ ಇಲ್ಲಿಯೇ ಇರುವನು ಈ ಮಠದ ಅಧಿಕಾರಿಯು. (**ತುಂಬಾಜಿಯನ್ನು ತೋರಿಸುವನು.**)

**ತುಂಬಾಜಿ**—ಅಯ್ಯಯ್ಯೋ! ನಾನು ಯಾವಾಗ ಈ ಮಠಕ್ಕೆ ಅಧಿಕಾರಿಯಾದೆ? ಏನು ಕಥೆ! (**ಮುಂಬಾಜಿಯನ್ನು ತೋರಿಸಿ**) ಸ್ವಾಮಿಾ ಸ್ವಾಮಿಾ! ಇವರೇ ನಮ್ಮ ಗುರುಗಳೂ ಈ ಮಠದ ಅಧಿಕಾರಿಗಳೂ ಆದ ಮುಂಬಾಜಿ ಸಾಧು ಮಹಾರಾಜರು.

**ಮುಂಬಾಜಿ**—ಕತ್ತೆ! ನನ್ನ ಹೆಸರನ್ನೇತಕ್ಕೆ ಹೇಳಿದೆಯೋ?

**ತುಂಬಾಜಿ**—ತಾವು ನನ್ನನ್ನೇತಕ್ಕೆ ತೋರಿಸಿದಿರಿ?

**ಪಂಡಿತರಾವ್**—(**ಮುಂಬಾಜಿಯನ್ನು ಹಿಡಿದು,**) ಎಲವೋ, ಅಯೋಗ್ಯಾ! ನೀನು ಸಂನ್ಯಾಸಿಯಾಗಿ ಈ ಆಭರಣಗಳನ್ನು ಎಲ್ಲಿ ಕದ್ದುತಂದೆ? ಹೇಳು!

**ತುಂಬಾಜಿ**—(**ನಡುಗುತ್ತ**) ಕ-ಕ-ಕ-ಕದಿಯಲಿಲ್ಲ; ಶಿ-ಶಿ-ಶಿ-ಶಿವಾಜೀ ಮಹಾರಾಜರು, ಕ-ಕ-ಕ-ಕಾಣಿಕೆಯಾಗಿ ಕ-ಕ-ಕಳುಹಿಸಿದರು.

**ಹಿರೋಜಿ**—ಓಹೋ! ಹಾಗಾದರೆ ಶಿವಾಜಿಯು ನಿನ್ನ ಶಿಷ್ಯನೇನು?

**ಮುಂಬಾಜಿ**—ಅಹುದು, ನನ್ನ ಶಿಷ್ಯನು. (**ನಡುಗುತ್ತ ನಿಲ್ಲುವನು.**)

**ಪಂಡಿತರಾವ್**—ಹಾಗಾದರೆ ನೀನು ಹೆದರಬೇಡ; ಆ ಶಿವಾಜಿಯನ್ನು ನಮಗೆ ತೋರಿಸಿ ಅವನನ್ನು ಯಾವ ರೀತಿಯಿಂದಲಾದರೂ ನಮ್ಮ ಕೈಗೆ ಸಿಕ್ಕಿಸಿದರೆ ನಮ್ಮ ಬಾದುಷಹನ ಕಡೆಯಿಂದ ನಿನಗೆ ಇದಕ್ಕಿಂತಲೂ ಅಧಿಕವಾದ ಬಹುಮಾನಗಳನ್ನು ಮಾಡಿಸುವೆವು. ಏನು ಹೇಳುವೆ?

**ಮುಂಬಾಜಿ**—(**ಧೈರ್ಯದಿಂದ ಆತ್ಮಗತ**) ಇವನು ನನಗೆ ಲಾಭಕರವಾಗಿಯೇ ಹೇಳುತ್ತಿರುವನು. ಇನ್ನು ನನಗೆ ಭಯವೇಕೆ! (**ಪ್ರಕಾಶಂ**) ಅಯ್ಯಾ! ಆ ಶಿವಾಜಿಯನ್ನು ಮಾತ್ರವಲ್ಲದೆ ಅವನ ಪಕ್ಷದ ಒಟ್ಟು ಜನಜಾಲವನ್ನೇ ಹಿಡಿದು ಕೊಡುವೆನು. ಆದರೆ ನಿಮ್ಮ ಬಹುಮಾನದ ಆಸೆಯಿಂದ ನಾನು ಅವರನ್ನು ಹಿಡಿದುಕೊಡುವೆನೆಂದು ತಿಳಿಯಬೇಡಿ......

**ಹಿರೋಜಿ**—ನಿಮಗೆ ಬೇಕಿಲ್ಲವಾದರೆ ನಾವು ಬಹುಮಾನವನ್ನು ಕೊಡುವುದೇ ಇಲ್ಲ.

**ಮುಂಬಾಜಿ**—ಹಾಗಲ್ಲ! ಹಾಗಲ್ಲ!! ನೀವೇನೋ ಸರಿಯಾದ ಬಹುಮಾನವನ್ನು ಕೊಡಲೇ ಬೇಕು. ಏತಕ್ಕೆಂದರೆ: ಮುಹಮ್ಮದೀಯರಾದ

ನೀವುಗಳು ನಮ್ಮ ದೇವಾಲಯಕ್ಕೆ ಪ್ರವೇಶಿಸಿದುದರಿಂದ ಈ ಸ್ಥಳವು ಅಪವಿತ್ರವಾಯಿತು.

**ತುಂಬಾಜಿ**—(ಆತ್ಮಗತ) ನಿಜ! ಆಂಜನೇಯನೂ ಅಪರಿಶುದ್ಧನಾದನು. ಮಹಮ್ಮದೀಯನಾಗಿ ಹೋದನು; ವೀರಾಂಜನೇಯನು ಪೀರಾಂಜನೇಯನಾಗಿ ಬಿಟ್ಟನು.

**ಮುಂಬಾಜಿ**—ಅಯ್ಯಾ, ನೀವು ಕೊಡುವುದರಲ್ಲಿ ಒಂದು ಕವಡೆಯನ್ನಾದರೂ ನಮ್ಮ ಸ್ವಂತಕ್ಕಾಗಿ ಉಪಯೋಗಿಸಿಕೊಳ್ಳುವುದಿಲ್ಲ. ಅದೆಲ್ಲವನ್ನೂ ಈ ದೇವರಿಗೆ ಮಾಡಬೇಕಾಗಿರುವ ಸಂಪ್ರೋಕ್ಷಣೆ ಶಾಂತಿಗಳಿಗಾಗಿ ಉಪಯೋಗಿಸಿ ಬಿಡುತ್ತೇವೆ.

**ಪಂಡಿತರಾವ್**—ಓಹೋ! ಹಾಗೋ? ತಿಳಿಯಿತು! ಹಾಗಾದರೆ ಮೊದಲು ಇದನ್ನು ತೆಗೆದುಕೋ, (**ತನ್ನ ಕಂಠದಲ್ಲಿದ್ದ ಹಾರವನ್ನು ಕೊಟ್ಟು**) ಅನಂತರ ನಿನಗೆ ಸಾಕು ಸಾಕೆನ್ನುವವರೆಗೂ ಕೊಡುತ್ತೇವೆ.

**ತುಂಬಾಜಿ**—(**ಆತ್ಮಗತ**) ಒದೆಗಳನ್ನು!

**ಮುಂಬಾಜಿ**—ಭಲ! ಭಲ!! ಉದಾರಿಗಳೆಂದರೆ ನೀವು! ಮಹೋದಾರಿಗಳು! ಹಿಂದೆ ಆ ಶಿವಾಜಿಯ ಕಡೆಯಿಂದ ಕೆಲವರು ಬಂದಿದ್ದರು. ಅವರು ಅಯೋಗ್ಯರು, ಕಳ್ಳರು, ಕಾಡುಜನರಂಥವರು! ಇನ್ನು ಆ ಶಿವಾಜಿಯನ್ನೇನೆಂದು ಹೇಳೋಣ! ಈ ವರೆಗೂ ನನ್ನ ಶಿಷ್ಯನೆಂದು ಅವನ ವಿಚಾರವನ್ನು ಹೇಳಿರಲಿಲ್ಲ. ಅವನಂತೂ ಈ ಕಳ್ಳರ ಗುಂಪಿಗೆಲ್ಲ ಒಡೆಯನು, ಮಹಾನೀಚ, ತಲೆಯೊಡಕ, ಕೆಡುಕ.........

**ಪಂಡಿತರಾವ್ ಮತ್ತು ಹಿರೋಜಿ**—(**ವೇಷಗಳನ್ನು ಬಿಚ್ಚಿ**) ಅಧಮಾ! ದುರಾತ್ಮಾ! ದ್ರೋಹೀ! ನಾವಿನ್ನೂ ಹಿಂದಿರುಗಲೇ ಇಲ್ಲ; ಆಗಲೇ ಇಂತಹ ದುರಾಲೋಚನೆಯಿಂದ ನಮ್ಮನ್ನೂ ನಮ್ಮ ಮಹಾರಾಜನನ್ನೂ ನಾನಾ ವಿಧವಾಗಿ ದೂರಿ ದೂಷಿಸುತ್ತಿರುವೆಯಾ? ಭ್ರಷ್ಟಾ! ಕೃತಘ್ನಾ! ಕಪಟ ಸಂನ್ಯಾಸೀ! ಪರಮ ಪವಿತ್ರವಾದ ಹಿಂದೂಮತಕ್ಕೂ ಪೂಜ್ಯವಾದ ಸಾಧುತ್ವಕ್ಕೂ ಅತ್ಯಂತಾಪಮಾನವನ್ನು

ತಂದ ನಿನಗೆ ಯಾವ ಶಿಕ್ಷೆ ಮಾಡಿದರೆ ತಾನೆ ಸಾಕಾಗುವುದು ! ಇಂತಹ ಕಪಟ ವೇಷದಿಂದ ಲೋಕದ ಜನರನ್ನು ವಂಚಿಸುವ ನೀನು ದೇಶ ದ್ರೋಹಿ, ಸ್ವಾಮಿದ್ರೋಹಿ, ದೈವದ್ರೋಹಿಯಲ್ಲವೇ ನೀಚಾ?

**ಹಿರೋಜಿ**—ಸುಳ್ಳು ಮೋಸ ನಟನೆಗಳಿಂದ ಪರರನ್ನು ಬೆರಗುಮಾಡಿ ಹಣವನ್ನು ಅಪಹರಿಸುವುದೇ ನಿಮ್ಮ ವೃತ್ತಿಯಲ್ಲವೇ?

**ಪಂಡಿತರಾವ್**—ಅಷ್ಟು ಮಾತ್ರವೇ ಅಲ್ಲ, ಉಪದೇಶವನ್ನು ಕೊಡುವ ನೆಪದಿಂದ ಏನೂ ಅರಿಯದ ತರುಣಿಯರನ್ನು ವಂಚಿಸಿ ವಶಮಾಡಿ ಕೊಳ್ಳುವ ನೀಚತನವೋ !

**ಹಿರೋಜಿ**—ಸರ್ವಜ್ಞರೆಂತಲೂ, ಸಾಧುಗಳೆಂತಲೂ, ವಿರಕ್ತರೆಂತಲೂ, ದೈವಭಕ್ತರೆಂತಲೂ ಹೇಳಿಕೊಂಡು ಜನರಿಂದ ಸೇವೆಮಾಡಿಸಿಕೊಳ್ಳುವ ಠಕ್ಕೋ !

**ಪಂಡಿತರಾವ್**—ಬಿರುದುಗಳೆಂಬ ನೆಪದಿಂದ ಬೇಕಾದ ಒಡವೆಗಳನ್ನಿಟ್ಟು ಕೊಂಡು ಮೆರೆಯುತ್ತಲೂ, ಏನೂ ತಿಳಿಯದ ಜನರ ಕಣ್ಣಿಗೆ ಮಣ್ಣ ನ್ನೆರಚಿ ಮನೆಗಳನ್ನೇ ಮುಳುಗಿಸುತ್ತಲೂ ಇರುವ ಇಂತಹ ರಾವಣ ಸಂನ್ಯಾಸಿಗಳನ್ನು ಕಟ್ಟಿ ಸೆಳೆದುಕೊಂಡು ಹೋಗಿ ನಮ್ಮ ರಾಜನ ಮುಂದೆ ಉರುಳಿಸಲೇ ಬೇಕಲ್ಲವೇ?

**ಹಿರೋಜಿ**—ಆಹಾ ! ಉರುಳಿಸಲೇ ಬೇಕು. ವಂಚನೆಯನ್ನೂ ದೇಶ ದ್ರೋಹ ದೈವದ್ರೋಹವನ್ನೂ ಲೇಶವಾದರೂ ಸಹಿಸದಿರುವ ಶಿವಾಜಿ ಮಹಾರಾಜನು ಇವನನ್ನು ಬೆಟ್ಟದ ಮೇಲಿನಿಂದ ತಳ್ಳಿಸಿದಾಗ ಇದರ ಫಲವನ್ನೀ ಭ್ರಷ್ಟನು ಅನುಭವಿಸಲಿ.

**ಮಂಬಾಜಿ**—ಅಯ್ಯಯ್ಯೋ ! ಬೆಟ್ಟದ ಮೇಲಿನಿಂದ ತಳ್ಳಿಸುವರೇ ! ಇನ್ನೇನು ಗತಿ !

**ಹಿರೋಜಿ**—ಅಧೋಗತಿ !

**ಮಂಬಾಜಿ**—ಆಂಜನೇಯಾ ! ಇನ್ನು ನಿನ್ನನ್ನು ಪೂಜಿಸುವರು ಯಾರೋ?

**ತುಂಬಾಜಿ**—**(ಆತ್ಮಗತ)** ನಾನು !

**ಮಂಬಾಜಿ**—ಇನ್ನು ನನ್ನ ಮಠದ ಗತಿಯೇನು!

**ತುಂಬಾಜಿ**—ನಾನೇ ಗುರುವೆಂದು ಮೊದಲೇ ತಾವು ಹೇಳಿದಿರಲ್ಲವೇ!

**ಮಂಬಾಜಿ**—ಅಯ್ಯೋ! ಮಗೂ ತುಂಬಾಜೀ!

**ತುಂಬಾಜಿ**—ಅಯ್ಯೋ! ಗುರುಗಳೇ!

**ಮಂಬಾಜಿ**—ಇನ್ನು ನನಗೆ ರಕ್ಷಕರು ಯಾರೋ! (**ಅಳುವನು.**)

**ಪಂಡಿತರಾವ್**—ಯಮಧರ್ಮರಾಯನು! ನಡೆ! ಹುಂ, ಅಯೋಗ್ಯಾ!

**ಮಂಬಾಜಿ**—ಸ್ವಾಮೀ! ಪಂಡಿತರಾಯರೇ! ನೀವು ಗೋಬ್ರಾಹ್ಮಣ ರಕ್ಷಕನಾದ ಶಿವಾಜೀ ಮಹಾರಾಜನ ಕಡೆಯ ಅಧಿಕಾರಿಗಳು! ಧರ್ಮಶೀಲರು! ಶರಣಾಗತನಾಗಿರುವ ನನ್ನನ್ನು ಕೊಲ್ಲಿಸಬೇಡಿ, ನನ್ನದು ಮಹಾಪರಾಧವಾಯಿತು. ನನಗೆ ಪ್ರಾಣದಾನ ಮಾಡಿ. (**ಪಂಡಿತರಾಯನ ಪಾದಗಳನ್ನು ಹಿಡಿದುಕೊಳ್ಳುವನು.**)

**ಪಂಡಿತರಾವ್**—ಎಲವೋ ಮಂಬಾಜೀ, ಈಗ ನಿನಗೆ ಜ್ಞಾನೋದಯವಾಯಿತೋ? ಪಶ್ಚಾತ್ತಾಪದಿಂದ ಶರಣಾಗತನಾಗಿ ಪ್ರಾಣದಾನವನ್ನು ಬೇಡುತ್ತಿರುವೆ; ಆದುದರಿಂದ ನಿನ್ನ ಪ್ರಾಣವನ್ನುಳಿಸಿದ್ದೇನೆ. ಆದರೆ ನಾನು ಹೇಳುವುದನ್ನು ಮಾತ್ರ ಚೆನ್ನಾಗಿ ಗ್ರಹಿಸಿ ನೆನಪಿನಲ್ಲಿಡು. ಲೋಕದಲ್ಲಿ ಸಾಧುಗಳ ಹೆಸರಿನಿಂದಲೂ ದೇವರ ಹೆಸರಿನಿಂದಲೂ ಧರ್ಮದ ಹೆಸರಿನಿಂದಲೂ ಅನೃತವನ್ನಾಡಿ, ಜನರನ್ನು ವಂಚಿಸಿ, ಧನಾರ್ಜನೆಯನ್ನು ಮಾಡುತ್ತಿರುವ ನಿನ್ನಂತಹ ಘೋರ ಪಾತಕಿಗಳು ರೌರವಾದಿ ನರಕಗಳಿಗೆ ಭಾಗಿಗಳಾಗುವರು. ಈಗಲಾದರೂ ನೀನು ಎಚ್ಚರವನ್ನು ತಂದುಕೊಂಡು ಪಶ್ಚಾತ್ತಾಪಪಟ್ಟು ಈ ಜನದ್ರೋಹವನ್ನೂ ಡಂಭಾಚಾರವನ್ನೂ ದುರಾಶೆಯನ್ನೂ ಬಿಟ್ಟು, ಸನ್ಮಾರ್ಗದಲ್ಲಿ ವರ್ತಿಸಿ ಇಹಪರಗಳಲ್ಲಿ ಸುಖವನ್ನು ಪಡೆ. (**ತನ್ನ ಕಡೆಯವರನ್ನು ನೋಡಿ**) ಎಲೈ! ಈ ಅಯೋಗ್ಯನನ್ನು ಬಿಟ್ಟುಬಿಡಿ! ಈ ಒಡವೆಗಳೆಲ್ಲವನ್ನೂ ಕಿತ್ತುಕೊಳ್ಳಿ. ಈ ಅಯೋಗ್ಯನ ಬಳಿಯಲ್ಲಿದ್ದರೆ ನಮಗೂ ಮಹಾ ಪಾತಕವುಂಟಾದೀತು. ಹೊರಡೋಣ.

(**ಅವರು ಕೊಟ್ಟದ್ದ ವಸ್ತ್ರಾಭರಣಗಳನ್ನು ಕಿತ್ತುಕೊಂಡು ಹೋಗುವರು.**)

**ಮಂಬಾಜಿ**—(**ಸ್ವಗತ**) ಸದ್ಯಕ್ಕೆ ಪ್ರಾಣದಮೇಲೆ ಬಂದಿದ್ದ ಮಾರಿಯು ಒಡವೆಗಳಮೇಲೆ ಹೋಯಿತು. ಸ್ವಲ್ಪ ಮಟ್ಟಿಗೆ ಮಾನವೂ ಹೋಯಿತು. (**ಆಲೋಚಿಸಿ**) ಆದರೆ ಮಾನವೆಂದರೇನು! ಅವಮಾನವೆಂದರೇನು! ಮಾನವು ಇದ್ದರೆ ಗುಡ್ಡದ ಗಾತ್ರ! ಹೋದರೆ ಕಡ್ಡಿಯ ಗಾತ್ರ! ಅದರ ಗಣನೆಯೇನು! (**ಶಿಷ್ಯರನ್ನು ಕೂಗಿ**) ಎಲವೋ! ಬನ್ನಿರೋ! ಒದಗಿದ್ದ ವಿಪತ್ತು ಪರಿಹಾರವಾದುದಕ್ಕಾಗಿ ಆಂಜನೇಯನ ಭಜನೆ ಮಾಡೋಣ.

**ತುಂಬಾಜಿ**—ನಿಜ! ಒದೆಗಳಿಂದ ಕಹಿಯಾಗಿದ್ದ ಬಾಯಿ ಪ್ರಸಾದದಿಂದ ಸಿಹಿಯಾಗಲಿ ಬನ್ನಿ.

(**ಶಿಷ್ಯರು ಬರುವರು. ಎಲ್ಲರೂ ಆಂಜನೇಯನ ಭಜನೆ ಮಾಡುವರು.**)*

**ದೃಶ್ಯ ೬—ರಾಜವೀಧಿ.** (**ಮಂಬಾಜಿಯ ಮಠದ ಮುಂಭಾಗ**)

(**ಪಂಡಿತರಾವ್ ಮತ್ತು ಹಿರೋಜಿ ಕಾಣಿಕೆಗಳ ತಟ್ಟೆಗಳನ್ನು ಹೊರಿಸಿಕೊಂಡು ಸೇವಕರೊಡನೆ ಬರುವರು.**)

**ಹಿರೋಜಿ**—ಪಂಡಿತರಾಯರೇ, ಲೋಕದಲ್ಲಿ ಎಂತೆಂತಹ ಧೂರ್ತರಿರುವರು ನೋಡಿದಿರಾ? ನಮ್ಮ ರಾಜನಿಂದಲೇ ಕಾಣಿಕೆಗಳನ್ನು ಪಡೆದು ಆತನನ್ನೂ ಆತನ ಪರಿವಾರವನ್ನೂ ಮಹಮ್ಮದೀಯ ರಾಜನಿಗೆ ಹಿಡಿದುಕೊಡುತ್ತೇನೆಂದು ಹೇಳಿದ ಆ ಮಂಬಾಜಿಯು ಇನ್ನೆಂತಹ ನೀಚನು! ರಾಜನ ವಿಷಯದಲ್ಲಿಯೇ ಇಂತಹ ದ್ರೋಹಚಿಂತನೆ ಮಾಡಿದ ದುರಾತ್ಮನು, ಇನ್ನು ಎಷ್ಟು ಜನರಿಗೆ ಎಷ್ಟೆಷ್ಟು ಮೋಸಗಳನ್ನು ಮಾಡಿರಬೇಕು! ಎಷ್ಟು ಮಂದಿಯ ಮನೆಗಳನ್ನು ಮುಳುಗಿಸಿರಬೇಕು! ಸಾಧುಗಳೆಂದು ಹೀಗೆ ಕಪಟ ವೇಷಗಳನ್ನು ಹಾಕಿಕೊಂಡು ಜಗತ್ತನ್ನೇ ವಂಚಿಸುತ್ತಿರುವ ಇಂತಹ ದೇಶದ್ರೋಹಿಗಳಿಗೆ ರಾಜದಂಡನೆಯಾಗಲೇ ಬೇಕಲ್ಲವೇ?

**ಪಂಡಿತರಾವ್**—ನಿಜ! ಆಗಲೇ ಬೇಕು, ಆದರೆ ಆ ಅಯೋಗ್ಯನು ತನ್ನ ಅಪರಾಧಕ್ಕಾಗಿ ಪಶ್ಚಾತ್ತಾಪಪಟ್ಟು ಶರಣಾಗತನಾಗಿ ಬಹಳವಾಗಿ

ಬೇಡಿಕೊಂಡುದರಿಂದ ನಾನು ಅವನನ್ನು ಪ್ರಾಣಸಹಿತವಾಗಿ ಬಿಟ್ಟೆನು. ಇಲ್ಲದಿದ್ದರೆ ಅವನಿಗೆ ಅತಿ ಘೋರವಾದ ಶಿಕ್ಷೆಯನ್ನೆ ಮಾಡಿಸಬೇಕೆಂದು ನಾನು ಆಲೋಚಿಸಿದ್ದೆನು.

**ಹಿರೋಜಿ**—ಗೋಬ್ರಾಹ್ಮಣ ರಕ್ಷಕನಾಗಿಯೂ ಸತ್ಯ ಧರ್ಮ ಪ್ರಿಯನಾಗಿಯೂ ಇರುವ ನಮ್ಮ ಶಿವಾಜೀ ಮಹಾರಾಜನಿಗೆ, ಇವನ ದುಷ್ಟತನವು ಗೋಚರವಾಗಿದ್ದರೆ, ಇವನು ಈವರೆಗೆ ಯಾವಾಗಲೋ ತೋರಣಗಡದ ಕೋಟೆಯ ಬುಡದ ರಣಹದ್ದುಗಳಿಗೆ ಆಹುತಿಯಾಗುತ್ತಿದ್ದನು. ನಾವು ಪೂಜ್ಯರಾದ ತುಕಾರಾಮ ಗುರು ಮಹಾರಾಜರನ್ನು ಹುಡುಕಿಕೊಂಡು ಬಂದು ಇವನನ್ನು ನೋಡಿದುದು ಕಾಮಧೇನುವನ್ನು ಕಾಣಲು ಬಂದು ಕತ್ತೆಯನ್ನು ನೋಡಿದಂತಾಯಿತು. ಆದರೆ ಆ ಅವಿವೇಕಿಯನ್ನು ಶಿಕ್ಷಿಸಿದ್ದರೆ ನಮಗೆ ಆಗುತ್ತಿದ್ದ ಫಲವೇನು! ಹೇಗಾದರೂ ಅವನಿಗೆ ತಕ್ಕಂತೆ ಬುದ್ಧಿಗಲಿಸಿದುದಾಯಿತು. ಮತ್ತು ಲೋಕದಲ್ಲಿ ಇವನ ವಿಚಾರವನ್ನು ತಿಳಿದು ಇತರ ಕಪಟಸಾಧುಗಳೂ ಬುದ್ಧಿಗಲಿತುಕೊಳ್ಳಲವಕಾಶವಾಯಿತು.

**ಪಂಡಿತರಾವ್**—ನಿಜ, ಇನ್ನು ಈ ಧನ ಕನಕ ವಸ್ತ್ರ ಭೂಷಣಾದಿಗಳೆಲ್ಲವನ್ನೂ ಪೂಜ್ಯರಾದ ತುಕಾರಾಮ ಸಾಧುಗಳ ಸನ್ನಿಧಿಗೆ ತೆಗೆದುಕೊಂಡು ಹೋಗಿ ಅರ್ಪಿಸೋಣ.

**ಹಿರೋಜಿ**—ಹಾಗೆಯೇ ಆಗಲಿ! ಈ ನೀಚನ ಬಳಿಯಲ್ಲಿ ನಾವು ಇಷ್ಟು ಕಾಲವನ್ನು ವ್ಯರ್ಥವಾಗಿ ಕಳೆದುದಾಯಿತು.

**ಪಂಡಿತರಾವ್**—ಹಾಗಲ್ಲ; ಇದು ಉತ್ತಮವೇ ಆಯಿತು! ಕೇಳು, ಲೋಕದಲ್ಲಿ ಇವನಂತೆ ಸಾಧುಗಳೆಂದು ಹೆಸರಿಟ್ಟುಕೊಂಡು ಜನವಂಚನೆಯನ್ನು ಮಾಡುತ್ತಿರುವ ಮೋಸಗಾರರಿನ್ನೂ ಅನೇಕರಿರಬಹುದು. ಇವರ ಗುಟ್ಟನ್ನೂ ವಂಚನೆಯನ್ನೂ ಅರಿತ ಸಾಮಾನ್ಯ ಜನರು, ಸಾಧುಗಳೆಂದರೆ ಲೋಕ ವಂಚಕರೆಂದು ಭಾವಿಸಿ, ಅದೇ ಅಭಿಪ್ರಾಯವನ್ನು ಲೋಕದಲ್ಲಿ ವಿಸ್ತರಿಸಿ, ಜನರಿಗೆ ಸಾಧು ಭಕ್ತಿಯು ಕಡಿಮೆಯಾಗುವಂತೆ ಮಾಡಲು ಅವಕಾಶವಾಗುತ್ತಿರುವುದು. ಇದ

ರಿಂದ ಜನರು ಮಹಾತ್ಮರಾದ ತುಕಾರಾಮರಂತಹ ಸಾಧುಗಳಿಂದ ಸದುಪದೇಶಗಳನ್ನು ಪಡೆದು ಹರಿಭಕ್ತಿ ಗುರುಭಕ್ತಿಗಳನ್ನಭಿವೃದ್ಧಿ ಪಡಿಸಿಕೊಳ್ಳಲು ಅವಕಾಶವು ತಪ್ಪುವುದು. ಹೀಗೆ ಜನರು ಸತ್ಪುರುಷ ರಾದ ಸಾಧುಗಳನ್ನು ಧಿಕ್ಕರಿಸಿ ದೈವಕೃಪೆಯನ್ನು ಕಳೆದುಕೊಳ್ಳುವರು. ಆದಕಾರಣ ಇನ್ನು ಮುಂದೆ ಇಂತಹ ವಂಚಕರನ್ನು ಹುಡುಕಿ ಅವರಿಗೆ ಬುದ್ಧಿ ಬರುವಂತೆ ಸಮಯೋಚಿತವಾಗಿ ತಕ್ಕ ಪ್ರತಿ ಕ್ರಿಯೆ ಯನ್ನು ನಾವು ಮಾಡಲೇ ಬೇಕಾಯಿತು. ಹೀಗೆ ಮಾಡುವುದರಿಂದ, ಸಾಧುಸೇವಾ ತತ್ಪರನೂ ಪರಮ ದೈವಭಕ್ತ ಶಿರೋಮಣಿಯೂ ಆದ ನಮ್ಮ ಶಿವಾಜಿ ಮಹಾರಾಜನ ಇಷ್ಟಕ್ಕೆ ತಕ್ಕಂತೆ ಲೋಕದಲ್ಲಿ ದುಷ್ಟರ ಹಾವಳಿಯೂ ಕಾಪಟ್ಯವೂ ಕಡಿಮೆಯಾಗಿ ಜನರು ಪುಣ್ಯಾವ ನ್ನಾರ್ಜಿಸಲವಕಾಶವಾಗುವುದು.

**ಹಿರೋಜಿ**—ನಿಜ! ನಿಜ! ಈ ಧೂರ್ತನು ನಮಗೆ ಸಂಧಿಸದೆ ಇದ್ದಿದ್ದರೆ ನಾವು ಅಂತಹ ದುಷ್ಟರನ್ನು ನಿಗ್ರಹಿಸಲು ಪ್ರಯತ್ನವನ್ನೆ ಮಾಡು ತ್ತಿರಲಿಲ್ಲ. ಸತ್ಯಶೀಲನಾದ ಶಿವಾಜಿ ಮಹಾರಾಜನ ಸೇವಕರಾದ ನಾವು ಆತನ ಇಷ್ಟದಂತೆ ದುಷ್ಟ ಶಿಕ್ಷಣ ಕಾರ್ಯವನ್ನು ಕೈಕೊಳ್ಳಲು ಈ ಮಂಬಾಜಿಯೇ ನಮಗೆ ಮಾರ್ಗವನ್ನು ತೋರಿಸಿದಂತಾ ಯಿತು.

**ಪಂಡಿತರಾವ್**—ನಿಜ, ಇನ್ನು ಮುಂದೆ ನಮ್ಮ ರಾಜ್ಯದಲ್ಲಿ ಇಂತಹ ಕಪಟಿಗಳು ಹೇಗೆ ತಲೆಯೆತ್ತುವರೋ ನೋಡೋಣ. ನಮ್ಮ ರಾಜ್ಯಾ ರಾಮದಲ್ಲಿ ಅಲ್ಲಲ್ಲಿರುವ ಮಂಬಾಜಿಯಂತಹ ಕಳೆಗಳನ್ನು ಕಿತ್ತುಹಾಕಿ ಮಹಾತ್ಮ ತುಕಾರಾಮರಂತಹ ಸತ್ಫಲಪ್ರದಗಳಾದ ಕಲ್ಪವೃಕ್ಷ ಗಳನ್ನು ನಾವು ವೃದ್ಧಿಮಾಡಲೇ ಬೇಕು. ಇನ್ನು ಬಾ, ತುಕಾರಾಮರ ಸನ್ನಿಧಿಗೆ ಹೋಗೋಣ.

**ಹಿರೋಜಿ**—ಹಾಗೆಯೇ ಆಗಲಿ.

(ಎಲ್ಲರೂ ಹೋಗುವರು.)

## ದೃಶ್ಯ ೭—ತುಕಾರಾಮನ ಮನೆ

(ತುಕಾರಾಮನು ವಿಠಲ ಭಜನೆ ಮಾಡುತ್ತಿರುವನು.) ೧೬

**ಜಿಜಾಬಾಯಿ**—ಅಯ್ಯೋ! ಇನ್ನೆಷ್ಟು ಚೆಚ್ಚಿಕೊಂಡರೆ ತಾನೆ ಇವರಿಗೆ ಬುದ್ಧಿ ಬಂದೀತು! ಈ ಸಂಸಾರ ಸರಿಹೋದೀತು! ನಾನಿನ್ನೇನು ತಾನೇ ಮಾಡಲಿ! ಎಷ್ಟೋ ಕಷ್ಟಪಟ್ಟು ಕೂಡಿಟ್ಟು ನಮ್ಮ ತೌರು ಮನೆಯಿಂದ ತಂದಿದ್ದ ಹಣವನ್ನು ವ್ಯಾಪಾರಮಾಡಿರೆಂದು ಕೊಟ್ಟರೆ ಆ ಪಂಡರಪುರದ ಪಾಂಡುರಂಗನ ಬಾಯಲ್ಲಿಟ್ಟು ನೀರು ಬಿಟ್ಟು ನಗು ನಗುತ್ತ ಕೈಬೀಸಿಕೊಂಡು ಮನೆಗೆ ಬಂದು ಕುಳಿತುಬಿಟ್ಟರಲ್ಲಾ! ಇಂಥವರ ಎದುರಿಗೆ ಕುಳಿತು ಹಣೆ ಹಣೆ ಚೆಚ್ಚಿಕೊಳ್ಳಲೇ! ಪ್ರಾಣ ಕಳೆದುಕೊಳ್ಳಲೇ! ಅಯ್ಯೋ! ಈ ಹಾಳು ಸಂಸಾರ ಮಾಡಲಾರದೆ ಎಲ್ಲಿಯಾದರೂ ಹೋಗಿ ಬಾವಿಯಲ್ಲಾದರೂ ಬೀಳಬೇಕು. "ತಾನು ತಿರುಪ ದಾನಧರ್ಮ." ಆಹಾಹಾ! ಕುಳಿತಿರುವುದು ನೋಡಮ್ಮಾ! ನನ್ನ ಸಮಾನರು ಯಾರೆಂದು! ಮನೆಯಲ್ಲಿ ನೋಡಿದರೆ ಕಾಳಿಲ್ಲ, ಕಡ್ಡಿ ಯಿಲ್ಲ; ಕೂಳಿಲ್ಲ, ಕುಪ್ಪಸವಿಲ್ಲ; ನಮಗಿಲ್ಲದಿದ್ದರೂ ಬೇಡ, ಮಕ್ಕಳಿ ಗಾದರೂ ಹೊಟ್ಟೆ ತುಂಬ ಅನ್ನ ಹಾಕೋಣವೆಂದರೆ ಅದಕ್ಕೂ ಮಾರ್ಗ ವಿಲ್ಲ. ಇಷ್ಟಾದರೂ ಪುಣ್ಯಾತ್ಮರ ಆನಂದವೇ ಆನಂದ; ಏನೆಂದರೂ ಅಲುಗಿ ಅಲ್ಲಾಡುವ ಹಾಗಿಲ್ಲ. ಭಜನೆಯಂತೆ, ಇವರಿಗೆ ಭಜನೆ. ಮೂರು ಹೊತ್ತೂ ವಿಠಲ, ಪಾಂಡುರಂಗ, ಪಂಡರಿರಾಯ, ಪಂಡರಿ ನಾಥ, ಇದಲ್ಲದೆ ಬೇರೆ ಸೊಲ್ಲೇ ಇಲ್ಲ. ದಿನ ದಿನವೂ ಆ ಪಂಡರೀ ರಾಯನ ಹೆಣಕ್ಕೆ ಚೆಚ್ಚಿಕೊಂಡೇ, ಇವರಿಗೆ ಮಂಕು ಮುಚ್ಚಿಕೊಂಡು ಬಡತನ ಹೆಚ್ಚಿಕೊಂಡು ನಮಗೆ ಸಾಯುವ ಹೊತ್ತು ಬಂತು. ಕೇಳಿ ದರೆ, "ಪಂಡರೀರಾಯ ನಮಗೆಲ್ಲವನ್ನೂ ಕೊಡುತ್ತಾನೆ, ನಮ್ಮೆಲ್ಲ ರನ್ನೂ ಕಾಪಾಡುತ್ತಾನೆ" ಎಂದು ಸಮಾಧಾನ ಹೇಳಿಬಿಡುತ್ತಾರೆ. ಇಗೋ ಕೊಟ್ಟ ಪಾಂಡುರಂಗ ಬಡತನವನ್ನು; ಆದುದಾಗಲಿ! ಈ ದಿನ ಆ ಪಂಡರೀರಾಯನ ತಲೆಯನ್ನೊಡೆದೇ ಬಂದೇನು!

(ಮೂಲೆಯಲ್ಲಿದ್ದ ಗುಂಡುಕಲ್ಲನ್ನೆತ್ತಿಕೊಂಡು ಆವೇಶದಿಂದ ಹೊರಡುವಳು.)

**ತುಕಾರಾಮ**—(ಹಿಡಿದು ನಿಲ್ಲಿಸಿ) ಎಲೆ! ಎಲೆ! ಇದೇನೇ! ಈ ಅನರ್ಥವು! ಈ ಗುಂಡುಕಲ್ಲೇನು? ಈ ಸಿಡುಕೇನು? ಈ ಅವತಾರವೇನು? ಇದೇನು? ನಿಲ್ಲು, ಸ್ವಲ್ಪ ನಿಲ್ಲು.

**ಜಿಜಾಬಾಯಿ**—(ತುಕಾರಾಮನ ಕೈಯನ್ನು ಕಿತ್ತುಹಾಕುತ್ತ) ಬಿಡಿ, ಬಿಡಿ ಅಂದರೆ! ಈಗಲೇ ನಿಮ್ಮ ಆ ಕರಿಯ ಪಾಂಡುರಂಗನ ತಲೆಯನ್ನು ಈ ಗುಂಡುಕಲ್ಲಿನಿಂದ ಜಜ್ಜಿ ಪುಡಿಮಾಡಿ ಬರುತ್ತೇನೆ.

**ತುಕಾರಾಮ**—ಅಯ್ಯೋ! ಹುಚ್ಚು ಹೆಂಗಸೇ! ನಮ್ಮ ಪಾಂಡುರಂಗನು ನಿನಗೇನು ಅಪರಾಧ ಮಾಡಿದನೇ?

**ಜಿಜಾಬಾಯಿ**—ಏನು! ಅಪರಾಧವೇ? ನೀವೇ ಹೇಳಿದಿರಲ್ಲವೇ ಪಾಂಡುರಂಗನು ಬ್ರಾಹ್ಮಣ ರೂಪದಿಂದ ಬಂದು ನಿಮ್ಮಿಂದ ಹಣವನ್ನು ತೆಗೆದುಕೊಂಡು ಹೋದನೆಂದು! ನಿಮ್ಮ ಹಣವನ್ನೆಲ್ಲಾ ಸಿಕ್ಕಿದವರಿಗೆ ಕೊಟ್ಟು ಹಾಳುಮಾಡಿದುದಲ್ಲದೆ ನಾನು ತೌರುಮನೆಯಿಂದ ತಂದಿದ್ದ ಹಣವನ್ನೂ ಆ ಪಂಡರೀರಾಯನ ಬಾಯಲ್ಲಿಟ್ಟು ನೀರು ಬಿಟ್ಟಿರಿ! ಹೀಗೆ ಮನೆ ಹಾಳುಮಾಡಿದಿರೆಂದು ನಾನು ಕೇಳಿದುದಕ್ಕೆ ಅವನು ನಮಗೆ ಬೇಕಾದ ಹಾಗೆ ಐಶ್ವರ್ಯವನ್ನು ತಟ್ಟೆಗಳಲ್ಲಿ ತುಂಬಿ ತುಂಬಿ ಕಳುಹಿಸುವನೆಂದು ನನಗೆ ಸಮಾಧಾನ ಹೇಳಿಬಿಟ್ಟಿರಿ. ನಾನು ಅದನ್ನು ನಂಬಿ ಬೆಳಗಿನಿಂದಲೂ ಅವನ ದಾರಿಯನ್ನೇ ಎದುರು ನೋಡುತ್ತಿದ್ದೆನು; ಅವನ ಸುಳಿವೇ ಇಲ್ಲ. ನಮ್ಮಿಂದ ಅಷ್ಟು ಹಣವನ್ನು ಕಸಿದುಕೊಂಡು ಹೋದ ಆ ಪಂಡರೀರಾಯನು ತಾನು ಒಂದು ವೇಳೆ ಮಣ್ಣನ್ನು ತಿಂದರೂ ಅದರಲ್ಲಿ ಒಂದು ಹಿಡಿಯಷ್ಟನ್ನಾದರೂ ನಮಗೆ ಕಳುಹಿಸಬೇಕಾಗಿತ್ತೋ ಇಲ್ಲವೋ?

**ತುಕಾರಾಮ**—ಅಯ್ಯೋ ಹುಚ್ಚಳೇ! ಮೂಲ ಧನವೇ ಇಲ್ಲದಿರುವಲ್ಲಿ ಲಾಭವೆಲ್ಲಿ ಬರಬೇಕು! ಕೇಳು—

**ಕಂ॥** ಭಾವವಮುದೇತೆರನಿರ್ದೇಶವು।
ದಾವಿಧದಿಂ ಫಲಮನಾಂಪ ನಿಳೆಯೊಳ್ ಮನುಜಂ ||
ದೇವೇಶನೊಳೆವ್ಮುಯಹಂ।
ಭಾವವಮುದೇಂ ಫಲಿಸಿದಪುದೆ ಬಿಡು ಬಿಡು ಚಪಲೇ ||೧೩||

ಚಿತ್ತ ಶುದ್ಧಿಯಿದ್ದವರಿಗೆ ಪಂಡರೀನಾಥನು ಸಕಲಾಭೀಷ್ಟಗಳನ್ನೂ ಕರುಣಿಸುವನು. ಆ ಚಿತ್ತಶುದ್ಧಿ ದೈವಭಕ್ತಿಗಳೆಂಬ ಮೂಲ ಧನವೇ ನಿನ್ನಲ್ಲಿಲ್ಲದಕಾರಣ ನಿನಗೆ ಯಾವ ಇಷ್ಟಾರ್ಥವೂ ದೊರೆಯದೆ ಸುಮ್ಮನೆ ಚಪಲತೆಯಿಂದ ಹೀಗೆ ಹಾರಾಡುತ್ತಿರುವೆ. ಈಗಲೂ ಶುದ್ಧಚಿತ್ತದಿಂದ ನಮ್ಮ ಪಾಂಡುರಂಗನನ್ನು ಭಜಿಸು, ನಿನಗೆ ಸುಖ ವಾಗುವುದು.

**ಜಿಜಾಬಾಯಿ**—ಸಾಕು, ಸಾಕು. ಇಷ್ಟು ಚಿತ್ತಶುದ್ಧಿ ಮಾಡಿದುದೇ ಸಾಕು. ಯಾವುದನ್ನು ಕೇಳಿದರೂ ಪಾಂಡುರಂಗ ಪಾಂಡುರಂಗ ನೆಂದು ಅವನಿಗಾಗಿ ಶಂಖವಾದ್ಯ ಮಾಡುತ್ತ ಏನಾದರೂ ಒಂದು ತಕ್ಕಿನ ಸಮಾಧಾನವನ್ನು ಹೇಳುತ್ತೀರಿ. ಆ ಹಾಳು ಪಾಂಡುರಂಗ ನನ್ನು ನಂಬಿದುದಕ್ಕೆ ನಮ್ಮ ಹಣವೆಲ್ಲವೂ ಅವನಿಗೇ ಸೇರಿ ನಿತ್ಯವೂ ಅವನಿಗೆ ಹೋಳಿಗೆ, ನಮಗೆ ಜೋಳಿಗೆ, ಅವನ ಕುತ್ತಿಗೆಗೆ ಮುತ್ತಿನ ಮಣಿ, ನನ್ನ ಕುತ್ತಿಗೆಗೆ ಕರಿಯಮಣಿ, ಅವನಿಗೆ ಪೀತಾಂಬರ, ನಮಗೆ ಜೀರ್ಣಾಂಬರ, ಈ ಸ್ಥಿತಿಯಾಗಿ, ಮನೆಯಲ್ಲಿ ಗ್ರಾಸಕ್ಕೂ ಸಹ ಮಾರ್ಗ ವಿಲ್ಲದೆ ಹೋರಾಡುವ ಹೊತ್ತು ಬಂತು.

**ತುಕಾರಾಮ**—ಎಲೌ ಹಾಗೆ ಹೇಳಬೇಡ; ನಿಜ ಭಕ್ತಿಯಿದ್ದರೆ ಪಂಡರೀ ನಾಥನು ನಮಗೆ ಸಕಲೈಶ್ವರ್ಯವನ್ನೂ ಕರುಣಿಸುವನು.

**ಜಿಜಾಬಾಯಿ**—ಮತ್ತೆ ಪಂಡರೀರಾಯನ ಹೆಸರನ್ನೆತ್ತಬೇಡಿ. ಸಾಕು, ನನಗೆ ತಲೆ ನೋಯುವುದು.

**(ಪಂಡಿತರಾವ್ ಹಿರೋಜಿ ಸಹ ಭೃತ್ಯರೊಡನೆ ಪ್ರವೇಶಿಸುವರು.)**

**ಜಿಜಾಬಾಯಿ**—**(ನೋಡಿ)** ಓಹೋ! ಇವರು ಯಾರು ನಮ್ಮ ಗೃಹ

ವ್ಯಾಜ್ಯವನ್ನು ಹೊಂಚು ಕೇಳುತ್ತಿದ್ದಾರೆ! (**ಪಂಡಿತರಾಯನನ್ನು ನೋಡಿ**) ಎಲ್ಯೆ, ನೀವು ಯಾರು? ಇಲ್ಲಿಗೇತಕ್ಕೆ ಬಂದಿರಿ? (**ಪಂಡಿತರಾವ್ ಮೊದಲಾದವರು ಸುಮ್ಮನಿರುವರು.**) ಏತಕ್ಕೆ ಮಾತನಾಡುವುದಿಲ್ಲ? ನಿಮಗೇನು ಬಿಗುರೋಗವೇ? ಕಾಯಿಸಿದ ಸೌಟನ್ನು ತಂದು ಬರೆ ಎಳೆಯಬೇಕೋ ಹೇಗೆ?

**ತುಕಾರಾಮ**—ಎಲೆ, ಎಲೆ, ಸ್ವಲ್ಪ ತಾಳು! ಮನೆಗೆ ಬಂದ ಭಕ್ತರಮೇಲೆ ಮಾರಿಯ ಹಾಗೆ ರೇಗಿ ಬೀಳುವೆಯಲ್ಲಾ! ಇದು ತರವಲ್ಲ. ಅವರು ಬಂದಿರುವ ಕಾರ್ಯವೇನೆಂಬುದನ್ನು ಸಾವಧಾನವಾಗಿ ಕೇಳಿ ತಿಳಿದುಕೊಳ್ಳೋಣ.

**ಪಂಡಿತರಾವ್**—ತಾಯಿಯಾ, ನಮ್ಮ ಶಿವಾಜಿ ಮಹಾರಾಜನು ನಮ್ಮನ್ನಿಲ್ಲಿಗೆ ಕಳುಹಿಸಿರುವನು. ನನ್ನ ಹೆಸರು ಪಂಡಿತರಾಯನೆಂದು.

**ಜಿಜಾಬಾಯಿ**—ಓಹೋ, ಪಂಡರೀರಾಯನು ನೀನೇನೋ! ಸರಿ! ಸರಿ! ಕಳ್ಳನು ಸಿಕ್ಕಿದ, ಕೈಗೆ ಸಿಕ್ಕಿದ. ಎಲ್ಯೆ, ನೀನು ಬ್ರಾಹ್ಮಣ ರೂಪದಿಂದ ಬಂದು ನಮ್ಮ ಯಜಮಾನರಿಂದ ಹಣವನ್ನು ತೆಗೆದುಕೊಂಡು ಹೋದೆಯಲ್ಲಾ! ಅದಕ್ಕಾಗಿ ಈಗ ನಮಗೇನನ್ನು ತಂದಿರುವೆ ಹೇಳು. (**ಪಂಡಿತರಾಯನು ಸುಮ್ಮನೆ ಆಶ್ಚರ್ಯದಿಂದ ನಿಂತಿರುವನು.**) ಸದ್ಯಕ್ಕೆ ಮನೆಯಲ್ಲಿ ಆಹಾರಕ್ಕೇ ಮಾರ್ಗವಿಲ್ಲ. ಹಿಟ್ಟು ಸೊಪ್ಪನ್ನಾದರೂ ಬೇಯಿಸಿ ತಿನ್ನೋಣವೆಂದರೆ ಅದಕ್ಕೂ ಗತಿಯಿಲ್ಲವಾಗಿದೆ; ಅದರಿಂದ ಈಗ ನೀನು ನಮಗಾಗಿ ಏನನ್ನು ತಂದಿರುವೆ ಹೇಳು, ಮಹಾರಾಯಾ!

**ಪಂಡಿತರಾವ್**—ತಾಯಿಯಾ, ಇನ್ನು "ಹಿಟ್ಟು ಸೊಪ್ಪು" ಎಂಬ ಬಡತನದ ಮಾತನ್ನು ಬಿಟ್ಟುಬಿಡಿ. ಇದೋ ತೆಗೆದುಕೊಳ್ಳಿ; ನಮ್ಮ ಶಿವಾಜಿ ಮಹಾರಾಜನು ಈ ಸುವರ್ಣ ರತ್ನಮಯವಾದ ಆಭರಣಗಳನ್ನೂ ದಿವ್ಯ ವಸ್ತ್ರಗಳನ್ನೂ ಧನವನ್ನೂ ನಿಮಗಾಗಿ ಕಾಣಿಕೆಯಾಗಿ ಕಳುಹಿಸಿರುವನು. (**ತಟ್ಟೆಗಳನ್ನು ತರಿಸಿ ಮುಂದಿರಿಸುವನು.**)

**ಜಿಜಾಬಾಯಿ**—(**ಆಶ್ಚರ್ಯದಿಂದ**) ಅಯ್ಯೋ! ಇದು ನಿಜವೇ! ಹಾಗಾ

ದರೆ ನಾನು ನಿಮ್ಮ ವಿಷಯದಲ್ಲಿ ಬಹಳ ದುಡುಕಿ ಮಾತನಾಡಿದೆನು. ಅಯ್ಯೋ! ಎಲುಬಿಲ್ಲದ ನಾಲಿಗೆ! ಎಷ್ಟು ಮಾತನ್ನಾಡಿತು!

**ಪಂಡಿತರಾವ್**—ಚಿಂತೆಯಿಲ್ಲ ತಾಯಿ! ಈ ಕಾಣಿಕೆಗಳನ್ನು ನೋಡಿ. **(ತಟ್ಟೆಗಳ ಮೇಲಣ ಮುಸುಕುಗಳನ್ನು ತೆರೆಯುವನು.)**

**ಜಿಜಾಬಾಯಿ**—(**ನೋಡಿ ಆಶ್ಚರ್ಯ ಸಂತೋಷಗಳಿಂದ**) ಅಯ್ಯೋ! ಅಯ್ಯೋ! ಎಷ್ಟು ಒಡವೆಗಳು! ಎಂತೆಂತಹ ಒಡವೆಗಳು! ಏನು ಕಥೆ! ಎಲೆ ಕಾಶೀ, ಮಹಾದೇವಾ! ಬನ್ನಿ ಬನ್ನಿ, ಇಲ್ಲಿ ಬನ್ನಿ! ಇಲ್ಲಿ ನೋಡಿ, ಓಹೋಹೋ! ಚಿನ್ನದ ಬಳೆ, ಚಿನ್ನದ ಕಡಗ, ಮುತ್ತಿನ ಮಾಲೆ, ರತ್ನದ ಓಲೆ, ಚಂದ್ರಹಾರ, ತಾಳೀಸರ ಇನ್ನೂ ಎಷ್ಟು ಒಡವೆಗಳು! ಎಂತೆಂತಹ ಸೀರೆಗಳು! ಎಂತೆಂತಹ ದಿವ್ಯ ಪೀತಾಂಬರಗಳು!

**ಕಾಶಿ**—ಅಮ್ಮಾ ಅಮ್ಮಾ! ಇವೆಲ್ಲವೂ ನಮಗೇನೇನಮ್ಮಾ?

**ಮಹಾದೇವ**—ಅಮ್ಮಾ! ಅಮ್ಮಾ! ಇಷ್ಟು ಒಡವೆಗಳೂ ವಸ್ತ್ರಗಳೂ ಎಲ್ಲಿಂದ ಬಂದವಮ್ಮಾ?

**ಜಿಜಾಬಾಯಿ**—ಏನು ಹೇಳಲಿ! ಮಗೂ! ನಮ್ಮ ತೌರುಮನೆಯ ಮಂಗಳಾದೇವಿಯ ಕೃಪೆಯಿಂದ ಇವೆಲ್ಲವೂ ಬಂತಪ್ಪಾ! ಬನ್ನಿ, ತಟ್ಟೆಗಳನ್ನು ತೆಗೆದು ಒಳಗಿಟ್ಟುಕೊಳ್ಳೋಣ. **(ತಟ್ಟೆಗಳನ್ನೆತ್ತುವರು.)**

**ತುಕಾರಾಮ**—(**ಅವಳ ಕೈಯಿಂದ ತಟ್ಟೆಯನ್ನು ಕಿತ್ತಿಟ್ಟು**) ಎಲಾ! **ಬೇಡ!** ಇವು ನಮಗೆ ಬೇಡ. ಇದು ನಿಜವಾದ ಐಶ್ವರ್ಯವಲ್ಲ! ನಮಗಿದರಿಂದ ಯಾವ ಪ್ರಯೋಜನವೂ ಇಲ್ಲ.

**ಜಿಜಾಬಾಯಿ**—ಚೆನ್ನಾಯಿತು! ಈಗ ನಿಮಗೆ ಹುಚ್ಚು ಹಿಡಿದಿರ ಬಹುದು ಅಷ್ಟೆ! ನೋಡಿ! ಇದು ಐಶ್ವರ್ಯವಲ್ಲವಂತೆ! ನೋಡಿ, ಚೆನ್ನಾಗಿ ಕಣ್ಣು ತೆರೆದು ನೋಡಿ.

**(ಶಿವಾಜಿಯು ಬಂದು ಮರೆಯಲ್ಲಿ ನಿಂತು ಎಲ್ಲವನ್ನೂ ನೋಡಿ ಕೇಳುತ್ತಿರುವನು.)**

**ತುಕಾರಾಮ**—ನೋಡಿದೆನು. ನಾನು ಕಣ್ಣು ತೆರೆದೇ ನೋಡುತ್ತಿರುವೆನು; ನೀನು ಮಾತ್ರ ಕಣ್ಣುಮುಚ್ಚಿ ಅಂಧಳಾಗಿ ಮಾತನಾಡು

ತ್ತಿರುವೆ. ಅಯ್ಯೋ! ಈ ತುಕಾರಾಮನ ಮನೆಗೆ ಮೋಹಾಂಧಕಾರ ಜನಕವಾದ ಈ ಹಣವೂ ಈ ವಸ್ತ್ರಾಭರಣಗಳೂ ಏತಕ್ಕೆ ಬಂದವು! ವಿಠಲಾ! ನನ್ನನ್ನು ಪರೀಕ್ಷಿಸಲು ಈ ರೀತಿ ಇವುಗಳನ್ನಿಲ್ಲಿಗೆ ಕಳುಹಿಸಿರುವೆಯಾ? ನಿನ್ನ ಪಾದಭಕ್ತಿಸಾಮ್ರಾಜ್ಯ ಸಂತೋಷವೆಂಬ ಐಶ್ವರ್ಯದ ಮುಂದೆ ಇದು ಐಶ್ವರ್ಯವೇ? ಅಣಿಮಾದ್ಯಷ್ಟೈಶ್ವರ್ಯಗಳನ್ನೂ ಕೊಡಬಲ್ಲ ನೀನು, ಈ ತೃಣಪ್ರಾಯವಾದ, ನಶ್ವರವಾದ ಲೋಹದ ತುಂಡುಗಳನ್ನೂ ಕಲ್ಲುಗಳನ್ನೂ ಬಟ್ಟೆಗಳನ್ನೂ ಐಶ್ವರ್ಯವೆಂಬದಾಗಿ ಕಳುಹಿಸಿರುವೆಯಲ್ಲಾ! ನಾನು ಇವುಗಳನ್ನು ನೋಡಿ ಬೆರಗಾಗಿ ಮೋಸಹೋಗತಕ್ಕವನೆಂದರಿತೆಯೋ? ನಿನ್ನ ದಿವ್ಯ ನಾಮಾಮೃತದ ರುಚಿಯನ್ನೂ ನಿನ್ನ ಕೀರ್ತನದ ಆನಂದವನ್ನೂ, ನಿನ್ನ ತೇಜೋಮಯವಾದ ದಿವ್ಯ ಮೂರ್ತಿಯ ಸಂದರ್ಶನ ಸಂತೋಷವನ್ನೂ ನಿನ್ನ ಮಹಿಮೆಯನ್ನೂ ತಿಳಿದು ನಿನ್ನ ಸೇವೆಯಿಂದ ಲಭಿಸುವ ನಿತ್ಯ ಸುಖಸೌಭಾಗ್ಯವನ್ನು ಪಡೆಯಲಿಚ್ಛಿಸುವ ನಿನ್ನ ಭಕ್ತರು ಈ ಅಲ್ಪವಾದ ಕಸವನ್ನು ಐಶ್ವರ್ಯವೆಂದು ತಿಳಿದು ಇದಕ್ಕಾಗಿ ಆಸೆಪಡುವರೆಂದರಿತೆಯಾ? ಆಸೆಯನ್ನು ಹೆಚ್ಚಿಸಿ, ಮೋಹಕ್ಕೆ ಸಿಕ್ಕಿಸಿ, ಮದವನ್ನುಕ್ಕಿಸಿ, ಐಹಿಕ ಸುಖಾಭಿಲಾಷೆಯನ್ನುದ್ರೇಕಮಾಡಿ ಕಾಮಕ್ರೋಧಾದಿಗಳಲ್ಲಿ ಮುಳುಗಿಸಿ, ಸತ್ಕೀರ್ತಿಯನ್ನೂ ಪಾರಮಾರ್ಥಿಕ ಬುದ್ಧಿಯನ್ನೂ, ಪಾರಲೌಕಿಕ ಸುಖವನ್ನೂ ಕಳೆಯುವ ಈ ನಶ್ವರವಾದ ಅರ್ಥವು ಅನರ್ಥಕಾರಿಯೆಂಬುದನ್ನು ಅರಿಯದ ಅಜ್ಞರು ಮಾತ್ರವೇ ಇದನ್ನು ಐಶ್ವರ್ಯವೆಂದು ಹೇಳಬೇಕಲ್ಲದೆ ನಾನು ಇದನ್ನು ಐಶ್ವರ್ಯವೆಂದು ಪರಿಗ್ರಹಿಸಲಾರೆನು. **(ಪಂಡಿತರಾಯನನ್ನು ನೋಡಿ)** ಸ್ವಾಮಿ, ಪಂಡಿತರಾಯರೇ! ತಾವು ದಯವಿಟ್ಟು ಇವುಗಳನ್ನು ಹಿಂದಕ್ಕೆ ತೆಗೆದುಕೊಂಡು ಹೋಗಬೇಕು.

**ಜಿಜಾಬಾಯಿ**—ಅಯ್ಯೋ? ಈ ಹುಚ್ಚು ಪುಣ್ಯಾತ್ಮರ ಅವಿವೇಕಕ್ಕೆ ನಾನೇನು ಮಾಡಲಿ! ತಾನಾಗಿ ಒಲಿದು ಬಂದು ಕೈಹಿಡಿದ ಭಾಗ್ಯಲಕ್ಷ್ಮಿಯನ್ನು ಕಾಲಿನಿಂದ ಒದೆಯುತ್ತಿರುವರಲ್ಲಾ! **(ತುಕಾರಾಮನನ್ನು ನೋಡಿ)** ಅಯ್ಯೋ! ನಿಮಗೆ ಹುಚ್ಚು ಹಿಡಿಯಿತೇನು? ಯಾವ ಹಣಕ್ಕೋಸ್ಕರ

ನಾವು ಇಷ್ಟು ದಿನಗಳೂ ಬಾಯಿ ಬಾಯಿ ಬಿಡುತ್ತಿದ್ದೆವೋ, ಯಾವುದು ನಮ್ಮ ಚಿಂತೆಯೆಲ್ಲವನ್ನೂ ತೊಲಗಿಸುವುದೋ ಅಂತಹ ಭಾಗ್ಯವು ನಮಗೆ ತಾನಾಗಿ ಲಭಿಸಿರುವಲ್ಲಿ ನೀವು ಈ ರೀತಿ ನಿರಾಕರಿಸುತ್ತಿರುವಿರಲ್ಲಾ! ಸಾಕು, ಸುಮ್ಮನಿರಿ; ನಿಮ್ಮ ಮಾತಿನಿಂದ ನನ್ನ ಮೈಯೆಲ್ಲವೂ ಉರಿಯುವುದು.

**ತುಕಾರಾಮ**—ಈ ಹಾಳು ಹಣದ ಮುಖವನ್ನು ನೋಡಿದರೆ ನನಗೂ ಮೈಯುರಿವುದು; ಮನಸ್ಸೂ ಉರಿಯುವುದು. ಆದುದರಿಂದ ಇದನ್ನು ಮೊದಲು ಸಾಗಿಸಿಬಿಡಬೇಕೆಂದು ನಿಶ್ಚಯಿಸಿರುವೆನು.

**ಜಿಜಾಬಾಯಿ**—(**ಹಣೆಯನ್ನು ಹೊಡೆದುಕೊಳ್ಳುತ್ತಾ**) ಅಯ್ಯೋ! ಎಲ್ಲಿಯಾದರೂ ಹೋಗಿ ಪ್ರಾಣ ಕಳೆದುಕೊಳ್ಳಲೇ! ಇಷ್ಟು ಐಶ್ವರ್ಯವನ್ನೂ ಹಿಂದಕ್ಕೆ ಕಳುಹಿಸಿದರೆ ಆ ಸಂಕಟವನ್ನು ಹೇಗೆ ಸಹಿಸಲಿ!

**ತುಕಾರಾಮ**--(**ಪಂಡಿತರಾಯನನ್ನು ನೋಡಿ**) ಸ್ವಾಮಿ, ನಮ್ಮ ಸಂಸಾರ ನಾಟಕರಂಗದಲ್ಲಿ ನಿತ್ಯವೂ ಈ ರೀತಿ ಒಂದೊಂದು ಕಥೆಯು ನಡೆಯುತ್ತಲೇ ಇರುವುದು. ಇದರಿಂದ ತಾವು ಮನಸ್ಸಿಗೆ ಬೇಸರಪಟ್ಟುಕೊಳ್ಳಬಾರದು. ಮೊದಲೇ ಸಂಸಾರ ರೋಗಪೀಡಿತರಾದವನಿಗೆ ಈ ಅರ್ಥವೆಂಬ ದುಷ್ಪಥ್ಯವನ್ನು ಕೊಟ್ಟರೆ ಆ ರೋಗವು ಮತ್ತಷ್ಟು ಪ್ರಬಲವಾಗಿ ಆ ರೋಗಿಯು ತನ್ನ ಪುಣ್ಯವೆಂಬ ಪ್ರಾಣವನ್ನು ಕಳೆದುಕೊಳ್ಳುವನಲ್ಲದೆ ಆ ವೈದ್ಯನಿಗೂ ಆದರಿಂದ ಹಾನಿಯುಂಟು. ಆದಕಾರಣ ಇನ್ನು ಮುಂದೆ ತಾವು ನಮ್ಮ ಮನೆಗೆ ಇಂತಹ ಅಪಥ್ಯ ಪದಾರ್ಥಗಳನ್ನು ತರಕೂಡದಾಗಿ ನಿಮ್ಮನ್ನು ಬೇಡಿಕೊಳ್ಳುತ್ತೇನೆ. ದಯೆಯಿಟ್ಟು ಇದೆಲ್ಲವನ್ನೂ ಹಿಂದಕ್ಕೆ ತೆಗೆದುಕೊಂಡು ಹೋಗಿ ನಿಮ್ಮ ಮಹಾರಾಜರಿಗೆ ಈ ನನ್ನ ವಿಜ್ಞಾಪನೆಗಳನ್ನು ತಿಳಿಸಿರಿ.

**ಶಿವಾಜಿ**—(**ಆತ್ಮಗತಂ**) ಆಹಾ! ಎಂತಹ ಪ್ರಚಂಡ ವೈರಾಗ್ಯವಿದು! ಇಂತಹ ಮಹಾ ವೈರಾಗ್ಯಶಾಲಿಯ ಎದುರಲ್ಲಿ ಪ್ರತ್ಯಕ್ಷ ಭಾಗ್ಯ ಲಕ್ಷ್ಮಿಯೇ ಬಂದು ನಿಂತರೂ, ಕಡೆಗೆ ಆಕೆಯೇ ನಾಚಿ ತಲೆತಗ್ಗಿಸಿಕೊಂಡು ಹೊರಟು ಹೋಗಬೇಕಾಗುವುದು.

**ಪಂಡಿತರಾವ್**—ಸಾಧು ಮಹಾರಾಜರೇ, ನನ್ನ ವಿಜ್ಞಾಪನೆಯನ್ನು ಲಾಲಿಸಬೇಕು. ಸಾಧು ಸತ್ಪುರುಷರ ಪುಣ್ಯಪ್ರಭಾವದಿಂದ ರಾಜ್ಯಕ್ಕೆ ಸಂತೋಷಾಭಿವೃದ್ಧಿಯುಂಟಾಗುವುದು. ಈ ತತ್ತ್ವವನ್ನರಿತ ನಮ್ಮ ಶಿವಾಜಿ ಮಹಾರಾಜರು, ಇವುಗಳನ್ನು ತಮ್ಮ ಪಾದಕಮಲಗಳಿಗೆ ಸಮರ್ಪಣಮಾಡಿ ಬರುವಂತೆ ನಮ್ಮನ್ನು ಕಳುಹಿಸಿರುವರು. ಅಲ್ಲದೆ ಅವರೂ ಸಹ ತಮ್ಮ ಪಾದ ಸಂದರ್ಶನ ಮಾಡಬೇಕೆಂಬ ಕುತೂಹಲ ದಿಂದಿರುವರು.

**ತುಕಾರಾಮ**—ಸರಿ, ಸರಿ, ಇಂತಹ ಸಮರ್ಪಣಗಳು ಆಶಾಪರರ ಸಂತರ್ಪಣಗಳು. ನನಗೆ ಆಸೆಯೆಲ್ಲವೂ ನಾಶವಾಗಿದೆ. ಆದಕಾರಣ ಇವುಗಳಿಂದ ನಮಗೇನಾಗಬೇಕು? ಅಲ್ಲದೆ ನಿಮ್ಮ ರಾಜರಿಂದ ನಮಗೇನಾಗಬೇಕು? ಅವರು ನಮ್ಮ ದರ್ಶನ ಮಾಡಲೇನು ಕಾರಣ? ನಮಗೆ ಯಾವ ಐಶ್ವರ್ಯಕ್ಕೆ ಕಡಿಮೆಯಾಗಿದೆ? ಪಾಂಡುರಂಗನು ತನ್ನ ವೈಕುಂಠವನ್ನೇ ನನಗೆ ಕೊಡತಕ್ಕವನಾಗಿರುವನು. ಪ್ರತಿ ವೈಕುಂಠವಾದ ಪಂಡರಪುರದಲ್ಲಿ ನನಗೆ ತನ್ನ ಸಂದರ್ಶನಾನಂದವನ್ನು ಆಗಾಗ ಕೊಡುತ್ತಿರುವನು. ಹೀಗಿರುವಲ್ಲಿ ನಮಗೆ ಯಾವ ವಿಷಯದಲ್ಲಿ ತಾನೆ ಕೊರತೆಯಿದೆ? ಆದುದರಿಂದ ನಾವು ನಿತ್ಯ ತೃಪ್ತಿ ಸಂತೋಷಗಳಿಂದ ಇರುವೆವೆಂತಲೂ, ರಾಜರಾದ ನೀವು ನಮ್ಮ ಸಂದರ್ಶನಕ್ಕೆ ಬರಲು ಕಾರಣವಿಲ್ಲವೆಂತಲೂ, ದೈವಭಕ್ತರಲ್ಲಿ ಇಂತಹ ಭಕ್ತಿ ವಿಶ್ವಾಸಗಳನ್ನಿಟ್ಟಿರುವ ನಿಮಗೆ ಪಾಂಡುರಂಗನು ನಿತ್ಯ ಮಂಗಳವನ್ನುಂಟುಮಾಡುವಂತೆಯೂ ಲೋಕದಲ್ಲಿ ನಿಮ್ಮ ಕೀರ್ತಿಯು ದಿಗಂತವಿಶ್ರಾಂತವಾಗುವಂತೆಯೂ ನಾವು ಆಶೀರ್ವದಿಸಿದೆವೆಂತಲೂ ಸಹ ನೀವು ನಿಮ್ಮ ಛತ್ರಪತಿ ಮಹಾರಾಜನಿಗೆ ತಿಳಿಸಿರಿ. ನಿಮ್ಮ ಛತ್ರಪತಿ ಶಿವಾಜಿಯು ರಾಜನಾಗಿದ್ದರೂ ನಮಗಿಂತಲೂ ಆತನು ಸುಖಿಯಲ್ಲ. ನಾವು ತ್ರಿಲೋಕಾಧಿಪತಿಯನ್ನು ನಂಬಿರತಕ್ಕವರು. ಆ ಜಗತ್ಪತಿಯಾದ ವಿಠಲನು ಕೊಡುವಂತಹ ನಿತ್ಯಾನಂದ ಸುಖವನ್ನು ನಿಮ್ಮ ಛತ್ರಪತಿಗಳು ನಮಗೆ ಕೊಡಲಾರರು. ಆದುದರಿಂದ ಅವರ ದರ್ಶನದಿಂದ ನಮಗೆ ಯಾವ ಫಲವೂ ಇಲ್ಲ.

**ಜಿಜಾಬಾಯಿ**—(**ಆತ್ಮಗತ**) ಇವರ ಮುಖಕ್ಕೆ ಮಂಗಳಾರತಿ ಎತ್ತಿ ದರು. ರಾಜನು ಕಳುಹಿಸಿದ ಐಶ್ವರ್ಯವನ್ನು ತಿರಸ್ಕರಿಸಿದುದಲ್ಲದೆ ರಾಜ ದರ್ಶನವನ್ನೂ ಬೇಡವೆನ್ನುವರಲ್ಲಾ! ಈ ಹುಚ್ಚು ಪುಣ್ಯಾತ್ಮರ ಅವಿವೇಕಕ್ಕೆ ನಾನೆಲ್ಲಿ ಹಾಳಾಗಿಹೋಗಲಿ?

**ಪಂಡಿತರಾವ್**—ಮಹಾಸ್ವಾಮಿ, ತಾವು ನಮ್ಮ ಶಿವಾಜೀ ಮಹಾ ರಾಜರಿಗೆ ದರ್ಶನ ಕೊಡಲು ಸಮ್ಮತಿಸದೆ ಹೋದರೆ ಅವರಿಗೆ ಮಾನ ಭಂಗ ಮನೋರಥಭಂಗಗಳೆರಡೂ ಆಗಿ, ಅವರು ಬಹಳವಾಗಿ ವ್ಯಸನ ಪಡುವರು.

**ತುಕಾರಾಮು**—ಅವರು ವ್ಯಸನಪಡಲು ಕಾರಣವಿಲ್ಲ. ನಮ್ಮ ರಾಜ ನಾದರೋ ಸಕಲ ಲೋಕ ಸೃಷ್ಟಿ ಸ್ಥಿತಿ ಲಯಕರ್ತನಾದ ವಿಠಲನು. ಆತನು ನಮಗೆ ಕೊಡುವ ಫಲವೋ ಅಸಮಾನವಾದುದು, ಅಮೂಲ್ಯ ವಾದುದು, ಅನಂತವಾದುದು. ಇನ್ನು ನಮ್ಮ ರಾಜ್ಯವಾದರೋ ಭುವನತ್ರಯವು. ಅಂತಹ ನಮ್ಮ ರಾಜ್ಯದ ಅಂಶಾಂಶ ಕೋಟಿಯಲ್ಲಿ ಅಂಶವೆನಿಸುವ ಈ ಸಾಮಾನ್ಯ ರಾಜ್ಯಕ್ಕೆ ಅಧಿಪತಿಯೆನಿಸಿ, ಕಾಮ ಕ್ರೋಧಾದಿಮಯನಾಗಿರುವ ನಿಮ್ಮ ರಾಜನು ನಮಗೆ ಅಂತಹ ಫಲ ವನ್ನು ಕೊಡಬಲ್ಲನೇ? ಸುರರಾಜನ ಮುಂದೆ ನರರಾಜನೇ? ಆತನು ನಮ್ಮ ರಾಜನ ಸಮನೆನಿಸುವನೇ?

**ಶಿವಾಜಿ**—(**ಮುಂದಕ್ಕೆ ಬಂದು ಕೈಮುಗಿದು**) ಇಲ್ಲ, ಇಲ್ಲ, ನಿಜವಾಗಿಯೂ ಇಲ್ಲ. (**ನಮಸ್ಕಾರಮಾಡಿ**) ಅದಕ್ಕಾಗಿಯೇ ಕಾಮ ಕ್ರೋಧಾದಿ ಶತ್ರು ವರ್ಗ ಮಧ್ಯಗತವಾದ ರಾಜ್ಯಾಧಿಕಾರದ ಅಭಿಮಾನವನ್ನು ಬಿಟ್ಟು ತಮ್ಮ ಪಾದಸಂದರ್ಶನಕ್ಕೆಂದು ಆತ್ಯಾತುರನಾಗಿ ಬಂದಿರುವೆನು.

**ಜಿಜಾಬಾಯಿ**—(**ಕಾತರಳಾಗಿ**) ಅಯ್ಯೋ! ಅಪ್ಪಾ! ಈತನೇ ಶಿವಾಜಿ ಮಹಾರಾಜನು! ಇನ್ನೇನು ಗತಿ! ಈ ನಮ್ಮ ಹುಚ್ಚು ಯಜಮಾನರು ಆಡಿದ ಮಾತುಗಳೆಲ್ಲವನ್ನೂ ಹೊಂಚು ಕೇಳಿದನೋ ಏನೋ! ಇನ್ನು ಇವರಿಗೆ ಯಾವ ಅವಸ್ಥೆಯನ್ನು ತರುವನೋ ಕಾಣೆನೇ! (**ಮಕ್ಕಳನ್ನು ಕರೆದು**) ಎಲೆ ಕಾಶೀ, ಮಹಾದೇವಾ, ಬನ್ನಿ ಬನ್ನಿ, ಬೇಗನೆ ಬನ್ನಿ;

ಮಹಾರಾಜರ ಪಾದಗಳ ಮೇಲೆ ಬೀಳಿ. ನಿಮ್ಮ ತಂದೆಯನ್ನು ಮನ್ನಿಸಿ ಕಾಪಾಡಬೇಕೆಂದು ಕೇಳಿಕೊಳ್ಳಿ. ಅವರ ಗ್ರಹಚಾರವು ಚೆನ್ನಾಗಿಲ್ಲ. (**ಮೂವರೂ ರಾಜನ ಪಾದಗಳಿಗೆರಗುವರು.**)

**ಶಿವಾಜಿ**—ತಾಯಿಾ, ನೀವು ಹೆದರಬೇಡಿ. ನನ್ನಿಂದ ನಿಮಗಾಗಲಿ, ಈ ನಮ್ಮ ಸಾಧು ಮಹಾರಾಜರಿಗಾಗಲಿ ಯಾವ ಕಷ್ಟವೂ ಒದಗಲಾರದು. ನನ್ನನ್ನು ನಿಮ್ಮ ಮಗನೆಂದು ತಿಳಿಯಿರಿ; ನೀವೇ ನನಗೆ ತಾಯಿಯು.

**ಜಿಜಾಬಾಯಿ**—ಅಯ್ಯೋ ಮಹಾರಾಜಾ! ನಾನು ನಿಮಗೆ ತಾಯಿ ಹೇಗಾದೇನಪ್ಪಾ! ಹಾಗಾಗುವುದಾದರೆ, ನನಗೆ ಮಗನು ಶಿವಾಜಿ ಮಹಾರಾಜನು, ಹೆಗಲೇರಿರುವವನು ಶನಿಮಹಾರಾಜನು! ಬರಬೇಕಾದುದು ಭಾಗ್ಯಲಕ್ಷ್ಮಿ, ಬಂದಿರುವವಳು ದರಿದ್ರಲಕ್ಷ್ಮಿ; ತಿನ್ನಬೇಕಾದುದು ಮೃಷ್ಟಾನ್ನ, ತಿನ್ನುವುದು ಮಾತ್ರ ಭಿಕ್ಷಾನ್ನ. ಹೀಗಿರುವಲ್ಲಿ ನೀವು ನಿರ್ಭಾಗ್ಯಳಾದ ನನ್ನನ್ನು ತಾಯಿಯೆನ್ನಬಹುದೇ?

**ಶಿವಾಜಿ**—ತಾಯಿಾ, ನೀವು ಹೀಗೆ ನಿರಾಶರಾಗಬೇಡಿ. ಈ ಸಕಲ ಧನಕನಕ ರತ್ನ ವಸ್ತ್ರಾಭರಣಗಳೆಲ್ಲವನ್ನೂ ನಿಮಗಾಗಿಯೇ ಕೊಟ್ಟಿರುವೆನಲ್ಲಾ!

**ಜಿಜಾಬಾಯಿ**—ಅಯ್ಯೋ? ಮಹಾರಾಜಾ! ಈ ಐಶ್ವರ್ಯವೆಲ್ಲವನ್ನೂ ನಮಗೆ ಕೊಡದಿದ್ದರೂ ಚಿಂತೆಯಿಲ್ಲ. ಹುಚ್ಚರಾದ ಈ ನಮ್ಮ ಯಜಮಾನರನ್ನು ಮಾತ್ರ ಸೆಳೆದುಕೊಂಡು ಹೋಗಬೇಡಿ. ಅವಿವೇಕದಿಂದ ಅವರಾಡಿದ ಮಾತುಗಳಿಗೆ ತಾವು ಕೋಪಮಾಡದೆ ದಯವಿಟ್ಟು ಮನ್ನಿಸಿ ನಮ್ಮನ್ನು ಕಾಪಾಡಬೇಕು ತಂದೇ! (**ರಾಜನ ಕಾಲಿಗೆ ಬೀಳುವಳು.**)

**ತುಕಾರಾಮ**—ಶಿವಪ್ಪಾ! ನಾನು ಪಂಡರಿನಾಥನ ಭಕ್ತನು. ನನಗೆ ಈ ರತ್ನಾಭರಣಗಳೇತಕ್ಕೆ? ಈ ಧನಕನಕ ವಸ್ತ್ರಾಭರಣಗಳೆಲ್ಲವೂ ನನ್ನ ಕಣ್ಣಿಗೆ ಮಣ್ಣಿನಂತೆ ಕಾಣುವವು. ಇಹಲೋಕದ ಐಶ್ವರ್ಯವೆಲ್ಲವೂ ನನಗೆ ಅಲ್ಪವಾಗಿಯೂ ತುಚ್ಛವಾಗಿಯೂ ಕಾಣುವುದು. ನನಗೆ ಮಾನಾವಮಾನಗಳು ಸಮಾನವಾಗಿರುವವು. ನನ್ನ ಸಕಲೈಶ್ವರ್ಯ ನಿಧಿಯೂ ಮಾನಮರ್ಯಾದೆಗಳ ಗಣಿಯೂ ನಮ್ಮ ಪಾಂಡು

ರಂಗನೊಬ್ಬನಲ್ಲದೆ ಬೇರೆಯಿಲ್ಲ. ಆದುದರಿಂದ ನನಗೆ ಉಪಕಾರ ಮಾಡಬೇಕೆಂಬದಾಗಿಯೂ ನನ್ನನ್ನು ಸಂತೋಷಪಡಿಸಬೇಕೆಂಬದಾಗಿಯೂ ನಿನ್ನ ಅಭಿಲಾಷೆಯಿದ್ದರೆ, ಲೋಕವೆಲ್ಲವೂ ಪುಣ್ಯವನ್ನಾರ್ಜಿಸಲು, ಶ್ರೀ ವಿಠಲನಾಮವು ನಿನ್ನ ರಾಜ್ಯದಲ್ಲೆಲ್ಲವೂ ತುಂಬುವಂತೆ ಮಾಡಬೇಕು. ಮನೆ ಮನೆಯಲ್ಲಿಯೂ ತುಲಸೀಬೃಂದಾವನ ಪೂಜೆಯು ನಡೆಯುವಂತೆ ಮಾಡಬೇಕು. ಆಬಾಲವೃದ್ಧರೂ ಹರಿಪ್ರೀತಿಕರವಾದ ಏಕಾದಶೀ ವ್ರತವನ್ನಾಚರಿಸುವಂತೆ ಶಾಸನವನ್ನು ಮಾಡಬೇಕು. ಹರಿಭಜನ ಕೀರ್ತನಗಳಿಗೆ ಪ್ರೋತ್ಸಾಹವನ್ನು ಕೊಡಬೇಕು. ಈ ರೀತಿ ಮಾಡಿದರೆ ಈಗ ನೀನು ಕಳುಹಿಸಿರುವ ಈ ಬಹುಮಾನಗಳಿಗಿಂತಲೂ ಕೋಟ್ಯಧಿಕವಾದ ಬಹುಮಾನವನ್ನು ನನಗೆ ಮಾಡಿದಂತಾಗುವುದು. ನನ್ನ ಮನಸ್ಸು ಸಂಪೂರ್ಣ ಸಂತೋಷವನ್ನು ಪಡೆಯುವುದು.

**ಶಿವಾಜಿ**—ಸತ್ಯ ಸತ್ಯ! ಗುರು ಮಹಾರಾಜ! ತಮ್ಮ ಕೃಪೆಯಿಂದ ಈ ದಿನ ನನ್ನ ಜ್ಞಾನ ನೇತ್ರಗಳು ತೆರೆದವು. ತಮ್ಮ ಉಪದೇಶದ ಮಹಿಮೆಯಿಂದ ನನ್ನ ಮನಸ್ಸಿನ ಮಾಯೆಯು ಮಾಯವಾಯಿತು. ಕಾಮಕ್ರೋಧಾದಿ ವೈರಿ ವರ್ಗದ ಎದೆಗೆ ಒದೆಯು ಬಿತ್ತು. ಸಂಸಾರ ಬಂಧನವು ಸಡಲಿತು. ಅಜ್ಞಾನಾಂಧಕಾರವು ಧ್ವಂಸವಾಯಿತು. ಪರಮಾತ್ಮನ ತೇಜೋಮಯ ಮೂರ್ತಿಯ ಸಾಕ್ಷಾತ್ಕಾರವನ್ನು ಪಡೆದಿರುವ ಮಹಾಮಹಿಮಾನ್ವಿತರಾದ ತಮ್ಮ ಸಂದರ್ಶನದಿಂದ ನಾನು ಧನ್ಯನಾಗಿ ಪರಮಾನಂದ ಪರವಶನಾದೆನು. ತಮ್ಮ ಆಜ್ಞೆಯಂತೆ ಹರಿಭಕ್ತಿಯನ್ನು ರಾಜ್ಯದಲ್ಲಿ ಅಭಿವೃದ್ಧಿಪಡಿಸುವೆನು. ಅಲ್ಲದೆ ಇಂದು ಮೊದಲಾಗಿ ನಾನು ತಮ್ಮ ಶಿಷ್ಯನಾದೆನು. ನನಗೆ ಪರಮಾತ್ಮನ ಸಾಕ್ಷಾತ್ಕಾರವು ತಮ್ಮಿಂದಲೇ ಲಭಿಸಬೇಕು.

**ತುಕಾರಾಮ**—ಮಹಾರಾಜಾ! ನೀನು ಪುಣ್ಯವಂತನು, ನಿನಗೆ ಈ ರೀತಿಯಾದ ಗುರುಭಕ್ತಿಯೂ ಹರಿಭಕ್ತಿಯೂ ಒದಗಿರುವುದು ನಿನ್ನ ನಿಜ ಸುಖ ಸೌಭಾಗ್ಯಕ್ಕೆ ಕಾರಣವು. ನಿನಗೆ ಈಗ ಆತ್ಮಜ್ಞಾನವುಂಟಾಯಿತು. ಈಗ ನೀನು ಜನಕರಾಜನಂತೆ ರಾಜಯೋಗಿಯಾಗಿರುವೆ.

ಇನ್ನು ನಿನಗೆ ಯಾವ ಭಯವೂ ಇಲ್ಲ. ಪಡಿಲಿರುವ ಸಂಸಾರ ಬಂಧ ನವು ಸಂಪೂರ್ಣವಾಗಿ ಕಳಚಿಬೀಳುವಂತೆ ನಿಶ್ಚಲ ಭಕ್ತಿ ವೈರಾಗ್ಯ ಜ್ಞಾನದಿಂದ ವರ್ತಿಸುವುದೇ ಮೋಕ್ಷಾಪೇಕ್ಷಿಗಳ ಕರ್ತವ್ಯವು. ನಿಜ ವಾದ ಸ್ಥಿರ ಭಕ್ತಿಯಿಂದ ಪುರುಷನು ಎಂತಹ ಶಕ್ತಿಯನ್ನಾದರೂ ಪಡೆಯಬಹುದು. ಎಂತಹ ಕಾರ್ಯಗಳನ್ನಾದರೂ ಸಾಧಿಸಬಹುದು. ಹಿಂದೆ ಶಿವಧ್ಯಾನ ಪರಾಯಣನಾದ ಮಾರ್ಕಂಡೇಯನು ಭಕ್ತಿಯೋಗ ದಿಂದ ಮೃತ್ಯುವನ್ನು ಗೆಲ್ಲಲಿಲ್ಲವೇ? ಜಿತೇಂದ್ರಿಯನಾಗಿ ಮಹಾ ತಪೋನಿಷ್ಠನಾಗಿದ್ದ ಅಗಸ್ತ್ಯನು ಸಾಗರವನ್ನೇ ಏಕಾಪೋಶನಮಾಡಿ ಕುಡಿದುಬಿಡಲಿಲ್ಲವೇ? ಬಾಲನಾದರೂ ಸ್ಥಿರ ಭಕ್ತಿಮಯನಾದ ಧ್ರುವನು ಶ್ರೀಮನ್ನಾರಾಯಣನ ಸಾಕ್ಷಾತ್ಕಾರವನ್ನು ಪಡೆದು ಕಡೆಗೆ ಸ್ಥಿರ ಪದವಿಯನ್ನಾರ್ಜಿಸಲಿಲ್ಲವೇ? ಆದಕಾರಣ ಸ್ಥಿರಪ್ರಯತ್ನ ದಿಂದ ಅಜವು ಗಜವಾಗುವುದು, ಹುಲ್ಲೆಯು ಹುಲಿಯಾಗುವುದು, ಕಿಂಕರನು ಶಂಕರನಾಗುವನು, ನರನು ನಾರಾಯಣನಾಗುವನು.

**ಶಿವಾಜಿ**—ನಿಜ! ನಿಜ! ಇಂದಿಗೆ ತಮ್ಮಿಂದ ಜ್ಞಾನೋಪದೇಶವನ್ನು ಪಡೆದು ನಾನು ಧನ್ಯನಾದೆನು. ನನ್ನ ಅಹಂಕಾರ ಮಮಕಾರಾದಿ ಗಳು ಇಂದಿಗೆ ಅಡಗಿದವು. ಆಸೆಯು ನಾಶವಾಯಿತು. ತತ್ವವು ಗೋಚರವಾಯಿತು. ಗುರು ಮಹಾರಾಜಾ! ಇನ್ನು ನನಗೆ ಪರ ಮಾತ್ಮನ ಅನುಗ್ರಹವು ಲಭಿಸುವಂತೆ ಆಶೀರ್ವದಿಸಬೇಕು.

(ನಮಸ್ಕರಿಸುವನು.)

**ತುಕಾರಾಮ**—ಸುಜ್ಞಾನವಿಭೂತಿಯನ್ನು ಪಡೆದು ಪುಣ್ಯಶಾಲಿಯೆನಿಸು. ಪಾಂಡುರಂಗನು ನಿನಗೆ ಮಂಗಳವನ್ನುಂಟುಮಾಡಲಿ.

**ಶಿವಾಜಿ**—ಗುರು ಮಹಾರಾಜಾ, ತಮಗೆ ಅರ್ಪಿಸಿದ ಈ ಕಾಣಿಕೆಗಳನ್ನು ಏನು ಮಾಡಬೇಕು?

**ತುಕಾರಾಮ**—ಸತ್ಪುರುಷರಿಗೂ ಸಾಧುಗಳಿಗೂ, ದೀನರಿಗೂ, ದರಿದ್ರ ರಿಗೂ ಅತಿಥಿಗಳಿಗೂ ಅಭ್ಯಾಗತರಿಗೂ ದಾನ ಮಾಡಬೇಕಾದುದು ಧರ್ಮವು.

**ಜಿಜಾಬಾಯಿ**—ಇದರಲ್ಲಿ ನಾವು ಸ್ವಲ್ಪ ತೆಗೆದಿಟ್ಟುಕೊಳ್ಳಲಾತಂಕವೇನು?

**ತುಕಾರಾಮ**—ಬೇಡ! ಇದು ನಮಗೆ ಬೇಡ! ಇದು ಆಗಲೇ ಇತರರಿಗೆ ಕೊಡಬೇಕೆಂದು ನಾನು ಸಂಕಲ್ಪಿಸಿರುವೆನು. ಇದರಲ್ಲಿ ಲೇಶವೂ ನಾವಿರಿಸಿಕೊಳ್ಳಬಾರದು.

**ಜಿಜಾಬಾಯಿ**—ಅಯ್ಯೋ! ಕಡೆಗೂ ನನ್ನ ಆಸೆಯೆಲ್ಲವೂ ವ್ಯರ್ಥವಾಯಿತೇ! (**ದುಃಖಿಸುವಳು.**)

**ಶಿವಾಜಿ**—ಗುರು ಮಹಾರಾಜಾ, ಪಾಂಡುರಂಗನಿಗೆ ಪೂಜಾನಿವೇದನಗಳನ್ನರ್ಪಿಸಿ ಪ್ರಸಾದವನ್ನು ಕರುಣಿಸಬೇಕು.

**ತುಕಾರಾಮ**—ಆಗಬಹುದು. ಭಜನೆಮಾಡುವ ಬನ್ನಿ. (**ಭಜನೆ ಮಾಡುವರು.**)

೧೭

## ದೃಶ್ಯ ೮—ದೇವಪುರದಲ್ಲಿ ಶಿವಾಜಿಯ ಬಿಡಾರ

(**ಶಿವಾಜಿ, ಪಂಡಿತರಾವ್ ಮತ್ತು ಹಿರೋಜಿ ಮಾತನಾಡುತ್ತಿ**ರುವರು.)

**ಶಿವಾಜಿ**—ಪಂಡಿತರಾವ್,

**ಪಂಡಿತರಾವ್**—ಪ್ರಭೂ,

**ಶಿವಾಜಿ**—ನನ್ನ ಅಪರಿಮಿತ ಪೂರ್ವ ಪುಣ್ಯವಿಶೇಷದಿಂದ ತುಕಾರಾಮ ಸಾಧು ಮಹನೀಯರ ಸಂದರ್ಶನವು ಲಭಿಸಿ ನಾನು ಧನ್ಯನಾದೆನು. ಅವರ ಸುಜ್ಞಾನ ವರ್ಷಕಗಳಾದ ದಿವ್ಯೋಪದೇಶವಾಕ್ಯಗಳನ್ನು ಕೇಳಿದುದು ಮೊದಲಾಗಿ ನನಗೆ ಈ ಪ್ರಪಂಚವು ನೀರಸವೂ ನಿಷ್ಫಲವೂ ಎಂದು ತೋರಿ ಆ ಪರಮಾತ್ಮನೊಬ್ಬನಲ್ಲಿ ಮಾತ್ರ ಚಿತ್ತವು ಲೀನವಾಗಿರುವುದು. ಐಶ್ವರ್ಯದಲ್ಲಿ ನನಗೆ ಆಸೆಯಿಲ್ಲ. ದೇಹಾಭಿಮಾನವಿಲ್ಲ. ರಾಜ್ಯಭಾರಾಪೇಕ್ಷೆಯು ಮಾಯವಾಯಿತು. ಕೋಟೆಕೊತ್ತಲಗಳೂ ದುರ್ಗಗಳೂ ನನಗೆ ದುರ್ಗಮವಾದ ಗವಿಗಳಾಗಿ ಕಾಣುವವು; ಅರಮನೆಯು ಸೆರೆಮನೆಯಂತಿರುವುದು. ವಿಷಯಾದಿಭೋಗಗಳು ವಿಷಸಮಾನಗಳಾಗಿರುವುವು. ಬಂಧುಬಳಗಗಳು ಬಂಧನಗಳಂತಿರುವರು. ಆದುದರಿಂದ ಇನ್ನು ನಾನು ಮತ್ತೆ ರಾಜಧಾನಿಗೆ

ಬರಲೊಲ್ಲೆನು. ರಾಜಭೋಗಗಳನ್ನು ಅನುಭವಿಸಲೊಲ್ಲೆನು! (**ರಾಜಾರ್ಹವಾದ ವಸ್ತ್ರಭೂಷಣಗಳನ್ನು ತೆಗೆದಿಟ್ಟು**) ಇದೋ! ಈ ವಸ್ತ್ರಭೂಷಣಗಳನ್ನು ತೆಗೆದುಕೊ! (**ಹಿರೋಜಿಯನ್ನು ನೋಡಿ**) ಹಿರೋಜೀ! ನೀನು ಪರಮ ರಾಜಭಕ್ತನೂ ಪರಾಕ್ರಮಿಯೂ ಆದ ಸೇನಾನಿಯು. ಇದೋ! ನೀನೀ ಖಡ್ಗವನ್ನು ತೆಗೆದುಕೊ! ಇದನ್ನು ದುಷ್ಟ ನಿಗ್ರಹ, ಶಿಷ್ಟ ಪರಿಪಾಲನೆಗಾಗಿ ಉಪಯೋಗಿಸಿ ಸಾರ್ಥಕ ಮಾಡು. (**ಖಡ್ಗವನ್ನು ಕೊಡುವನು.**) ಪಂಡಿತರಾವ್, ರಾಜಕಾರ್ಯ ನಿಪುಣನಾದ ನಿನ್ನಿಂದ ರಾಜ್ಯಕ್ಕೆ ಸದಾ ಕುಶಲವುಂಟಾಗುವುದೆಂದು ತಿಳಿದಿರುವೆನು. ಇನ್ನು ಇದೇ ನಮನಮಗೆ ಕಡೆಯ ಸಮಾಗಮ.

**ಪಂಡಿತರಾವ್**—(**ವ್ಯಸನದಿಂದ**) ರಾಜೇಂದ್ರಾ! ತಾವು ಹೀಗೆ ವೈರಾಗ್ಯಶಾಲಿಯಾದರೆ ತಮ್ಮನ್ನು ನಂಬಿರುವ ನಮ್ಮ ಗತಿಯೇನು? ಇನ್ನು ನಾವು ಮಹಾರಾಜ್ಞಿಯವರಿಗೆ ಮುಖವನ್ನು ತೋರಿಸುವುದು ಹೇಗೆ? ಮತ್ತು ವಿಜ್ಞಾಪಿಸುವುದು ತಾನೆ ಏನನ್ನು? ಈ ವಾರ್ತೆಯನ್ನು ಕೇಳಿ ದುಃಖಿಸುವ ಅವರನ್ನು ಸಮಾಧಾನಪಡಿಸುವುದುತಾನೆ ಹೇಗೆ?

**ಶಿವಾಜಿ**—ನೀವು ಆ ವಿಷಯದಲ್ಲಿ ಆಲೋಚಿಸಬೇಡಿ. ನನಗಾಗಿ ಯಾರು ದುಃಖಪಡುವುದಕ್ಕೂ ಕಾರಣವಿಲ್ಲ. ಪಂಡಿತರಾವ್, ಹಿರೋಜೀ, ನೀವು ಮನಸ್ಸಿಗೆ ಬೇಸರವನ್ನು ತಂದುಕೊಳ್ಳಬೇಡಿ. ನನ್ನ ವೃತ್ತಾಂತವೆಲ್ಲವನ್ನೂ ಮಾತೆಯವರಿಗೆ ತಿಳಿಸಿ ನನಗೆ ಪ್ರತಿಯಾಗಿ ನೀವು ಆಕೆಗೆ ಪುತ್ರರಂತೆ ಇದ್ದು, ಹಿಂದೂಧರ್ಮ ರಕ್ಷಣವನ್ನು ಮಾಡಬೇಕೆಂಬ ಆಕೆಯ ಅಭಿಮತವನ್ನು ನೀವು ತಪ್ಪದೆ ಸಾರ್ಥಕಪಡಿಸಬೇಕು. ಅಲ್ಲದೆ ಪೂಜ್ಯರಾದ ತುಕಾರಾಮ ಗುರುಮಹಾರಾಜರ ಅಪ್ಪಣೆಯಂತೆ ರಾಜ್ಯದಲ್ಲಿ ಹರಿಭಕ್ತಿ ಗುರುಭಕ್ತಿಗಳನ್ನು ವಿಧವಿಧವಾದ ರೀತಿಗಳಿಂದ ಅಭಿವೃದ್ಧಿಪಡಿಸಿ ಜನರು ಪುಣ್ಯಶೀಲರಾಗುವಂತೆ ಮಾಡಬೇಕು. ಆದುದರಿಂದ ಇನ್ನು ನೀವು ರಾಜಧಾನಿಗೆ ಹೊರಡಿ. ನನಗೆ ಮತ್ತೆ ಪ್ರತಿಯಾದ ಉತ್ತರವನ್ನು ಹೇಳಿ ವಿಳಂಬಮಾಡಬೇಡಿ. ಇನ್ನು ನನಗೆ ಅರಣ್ಯವೇ ಮನೆಯು, ಶ್ರೀ ಹರಿಧ್ಯಾನವೇ ಅನ್ನಪಾನಗಳು; ಶ್ರೀ

ತುಕಾರಾಮ ಸಾಧುಗಳ ಸನ್ನಿಧಿಯೇ ನನ್ನ ವೈಕುಂಠವು. ಇನ್ನು ಆಶಾದಿಗಳಿಗೆ ಮನಸ್ಸನ್ನಾಕರ್ಷಿಸುವ ನಗರದಲ್ಲಿ ನಾನು ವಾಸಿಸ ಲಾರೆನು. ಇದೋ ಈಗಲೇ ನಿರ್ಜನವಾದ ಮತ್ತು ನಿರಾತಂಕ ವಾದ ಅರಣ್ಯದಲ್ಲಿ ಧ್ಯಾನಪರಾಯಣನಾಗಿರಲು ಹೊರಡುವೆನು.

**ಸಾ॥** ವಾಸುದೇವನಡಿದಾವರೆ ತಾನಾ। ವಾಸವಾದುದೀ ಮನಕೆ ||
ಆಸೆಯಿಲ್ಲವೀ ದೇಶಕೋಶದೊಳ। ಗೀ ಶಿವಾಜಿ ಕಾಂಬದುಕೆ ||

(**ಹೋಗುವನು.**)

**ಹಿರೋಜಿ**—ಪಂಡಿತರಾಯರೇ ! ಅನರ್ಥವೇ ಸಂಭವಿಸಿತು ! ಮುಂದೆ ಗತಿಯೇನು ?

**ಪಂಡಿತರಾವ್**—(**ವ್ಯಸನದಿಂದ**) ಸ್ವಪ್ನದಲ್ಲಿಯೂ ಈ ಸ್ಥಿತಿಯಾಗುವು ದೆಂದು ಊಹಿಸುವುದಕ್ಕೆ ಅವಕಾಶವಿರಲಿಲ್ಲ. ದೈವ ಸಂಕಲ್ಪ. ಆಗಲಿ. ಇನ್ನು ಕ್ಷಿಪ್ರದಲ್ಲಿ ರಾಜಧಾನಿಗೆ ಹೋಗಿ ಮಹಾ ಮಾತೃಶ್ರೀಯವ ರಿಗೂ ರಾಣಿಯವರಿಗೂ ಈ ವಿಚಾರವನ್ನು ವಿಜ್ಞಾಪಿಸಿ ಅವರ ಅಪ್ಪಣೆ ಯಂತೆ ನಡೆಯೋಣ, ಬಾ. (**ಹೋಗುವರು.**)

**ಪ್ರಥಮಾಂಕಂ ಸಂಪೂರ್ಣಂ.**

——:o:——

# ದ್ವಿತೀಯಾಂಕಂ

---

## ಸ್ಥಾನ ೧—ಪೂನಾ ನಗರದಲ್ಲಿ ಶಿವಾಜಿಯ ಅರಮನೆ

( ಶಿವಾಜಿಯ ಪತ್ನಿಯಾದ ಸಯಿಬಾಯಿ ಆಲೋಚಿಸುತ್ತ ಕುಳಿತಿರುವಳು. )

**ಸಯಿಬಾಯಿ—** ೧೮

**ಕಂ॥** ಸಾಧು ಮಹಾತ್ಮರ ದರ್ಶನ।
ಕೈದಿದ ಮತ್ಕಾಂತನೇತಕೈತರನೆನಗಿಂ ||
ದಾದುದು ಭಯಮಾಶ್ಚರ್ಯಮುಂ।
ಮಾದಂ ಪ್ರಿಯನೆಂದು ಬಂದು ಮುದುಮೊಸಗುವನೋ ||

ಏತಕ್ಕೆ ನನ್ನ ಮನಸ್ಸಿಗೆ ಹೀಗೆ ಭೀತಿ ತೋರುತ್ತಿರುವುದು! ಕ್ಷಿಪ್ರದಲ್ಲಿ ಬರುತ್ತೇನೆಂದು ಹೇಳಿ ಮಹಾತ್ಮ ತುಕಾರಾಮರ ಸನ್ನಿಧಿಗೆ ಹೋದ ಆರ್ಯಪುತ್ರನು ಹಿಂದಿರುಗಿ ಬರಲು ಇಷ್ಟು ವಿಳಂಬವೇಕಾಗಿರಬಹುದು! ಗುರುಭಕ್ತಿ ಪರವಶನಾದ ಆತನು ಆ ಮಹನೀಯರ ಭಕ್ತಿ ಜ್ಞಾನ ವೈರಾಗ್ಯಗಳನ್ನು ನೋಡಿ ತನ್ನ ಕರ್ತವ್ಯಗಳನ್ನೇ ಮರೆತು ಅವರಂತೆಯೇ ಭಜನೆಯಲ್ಲಿ ಲೀನನಾಗಿಬಿಟ್ಟನೋ! ಅಥವಾ ವೈರಾಗ್ಯ ಚಕ್ರವರ್ತಿಗಳಾದ ಆ ಪುಣ್ಯಶೀಲರ ಉಪದೇಶದಿಂದ ತಾನೂ ವಿರಕ್ತನಾಗಿ ನಮ್ಮನ್ನು ಮರೆತೇ ಬಿಟ್ಟನೋ! ಇದರ ನಿಜಾಂಶವೇನೋ ತಿಳಿಯಲೇ ಇಲ್ಲವಲ್ಲಾ! ಆರ್ಯಪುತ್ರನು ರಣರಂಗಗಳಿಗೂ ವಿಜಯಯಾತ್ರೆಗಳಿಗೂ ಹೊರಟಾಗಲೂ ಸಹ ಬೆದರದೆ ಇದ್ದ ನನ್ನ ಮನಸ್ಸಿಗೆ ಈ ದಿನ ಇಂತಹ ಭಯ ಕುತೂಹಲಗಳುಂಟಾಗಲು ಕಾರಣವೇನಿರಬಹುದು! ಇನ್ನು ಆತನು ಯಾವಾಗ ಹಿಂದಿರುಗಿ ಬರುವನು! ನಾನು ಪ್ರಿಯನೊಡನೆ ಆ ಮಹಾತ್ಮ ತುಕಾರಾಮ ಸಾಧುಗಳ ದರ್ಶನ ಸೇವಾನಂದಗಳನ್ನು ಯಾವಾಗ ಪಡೆಯುವೆನು.

**ಪಂಡಿತರಾವ್**—(ಪ್ರವೇಶಿಸಿ ನಮಸ್ಕರಿಸಿ) ದೇವಿಯವರೇ !

**ಸಯಿಾಬಾಯಿ**—(ನೋಡಿ ಕುತೂಹಲದಿಂದ) ಓಹೋ ! ಪಂಡಿತರಾಯರೇ ? ಏನು ! ಸಾಧು ಮಹನೀಯರ ಸಂದರ್ಶನವಾಯಿತೋ ! ಛತ್ರಪತಿಗಳು ಅರಮನೆಗೆ ದಯಮಾಡಿಸಿದರೋ ?

**ಪಂಡಿತರಾವ್**—ದೇವಿಯವರೇ, ಸಾಧು ಮಹನೀಯರ ಸಂದರ್ಶನವೇನೋ ಆಯಿತು. ಮಹಾರಾಜರವರು ಅವರ ಭಕ್ತಿ ವೈರಾಗ್ಯಗಳನ್ನು ನೋಡಿ ಪರವಶರಾಗಿ, ಭೋಗ ತ್ಯಾಗಮಾಡಿ ವೈರಾಗ್ಯದಿಂದ ದೈವ ಧ್ಯಾನದಲ್ಲಿ ಕಾಲವನ್ನು ಕಳೆಯಲು ನಿಶ್ಚಯಿಸಿ ಅರಣ್ಯವಾಸಿಯಾಗಲು ಹೊರಟು ಹೋದರು.

**ಸಯಿಾಬಾಯಿ**—ಏನು ! ಏನು !! ಭೋಗ ತ್ಯಾಗಮಾಡಿ ವೈರಾಗ್ಯದಿಂದ ಕಾಲವನ್ನು ಕಳೆಯಲು ಅರಣ್ಯವಾಸಕ್ಕೆ ಹೋದರೇ? ಅಯ್ಯೋ ! ಮುಂದೇನು ಗತಿ !

**ಪಂಡಿತರಾವ್**—ಈ ವಸ್ತ್ರ ಭೂಷಣಗಳನ್ನು ನನ್ನ ವಶಕ್ಕೆ ಕೊಟ್ಟು ಈ ವಿಚಾರವನ್ನು ತಮ್ಮ ಸನ್ನಿಧಿಗೂ ಮಾತೆಯವರ ಸನ್ನಿಧಾನಕ್ಕೂ ವಿಜ್ಞಾಪಿಸುವಂತೆ ನನಗಾಜ್ಞೆಮಾಡಿ ಹೊರಟರು. ಅರಮನೆಗೆ ದಯಮಾಡಿಸಬೇಕೆಂದು ವಿಧವಿಧವಾಗಿ ಬೇಡಿಕೊಂಡ ನಮ್ಮಗಳ ಪ್ರಾರ್ಥನೆಯೆಲ್ಲವೂ ವ್ಯರ್ಥವಾಯಿತು.

**ಸಯಿಾಬಾಯಿ**—(ದುಃಖಿಸುತ್ತಾ) ಅಯ್ಯೋ ! ಪ್ರಾಣಕಾಂತನು ಅರಣ್ಯವಾಸಿಯಾದಮೇಲೆ ನಾನಿನ್ನು ಹೇಗೆ ಜೀವಿಸಿರಲಿ ! ರಾಜನು ಅರಣ್ಯವಾಸಿಯಾದರೆ ರಾಜ್ಯದ ಗತಿಯೇನು ! ಆಹಾ ನನ್ನ ಮನಸ್ಸಿನಲ್ಲಿ ಉಂಟಾದ ಭೀತಿಗೆ ತಕ್ಕಂತೆಯೇ ಫಲವೂ ಒದಗಿತಲ್ಲಾ ! ಇನ್ನು ನನ್ನ ಗತಿಯೇನು ! ವೃದ್ಧಾಪ್ಯದಲ್ಲಿರುವ ಅತ್ತೆಯವರು ಈ ವಿಚಾರವನ್ನು ಕೇಳಿದರೆ ಎಷ್ಟು ಸಂತಾಪ ಪಡುವರು ! ಅಯ್ಯೋ ! ಪಂಡಿತರಾಯರೇ ! ಈಗ ಹೇಗಾದರೂ ಪ್ರಯತ್ನಮಾಡಿ ನನ್ನ ಪ್ರಾಣನಾಥನ ಮನಸ್ಸನ್ನು ತಿದ್ದಿ ಅವರನ್ನು ಅರಮನೆಗೆ ಕರೆತರಲೇ ಬೇಕು. ಇದು ಆಪ್ತರೂ ಮಹಾ ಮನೀಷಿಗಳೂ ಆದ ನಿಮ್ಮಿಂದಲ್ಲದೆ ಇತರರಿಂದ ಸಾಧ್ಯವಲ್ಲ.

ನೀವು ನನಗೆ ಭ್ರಾತೃ ಸಮಾನರು. ರಾಜ್ಯದ ಶ್ರೇಯಸ್ಸನ್ನು ಬಯಸ ತಕ್ಕವರು. ನಮ್ಮ ಅತ್ತೆಯವರಿಗೆ ಪುತ್ರ ಸಮಾನರು. ಸದಾ ಆರ್ಯ ಪುತ್ರನ ಕುಶಲಾಕಾಂಕ್ಷಿಗಳು. ಆದುದರಿಂದ ರಾಜನಿಗೂ ರಾಜ್ಯಕ್ಕೂ ನಮಗೂ ಹಿತವನ್ನುಂಟುಮಾಡುವ ಈ ಕಾರ್ಯವನ್ನು ಕೈಕೊಂಡು ಆರ್ಯಪುತ್ರನನ್ನು ಮತ್ತೆ ಇಲ್ಲಿಗೆ ಬರುವಂತೆ ಮಾಡಲೇ ಬೇಕು. ಆದುದ ರಿಂದ ಈಗ ನೀವು ನನ್ನನ್ನು ಆರ್ಯಪುತ್ರನಿರುವ ಕಡೆಗೆ ಕರೆದುಕೊಂಡು ಹೋದರೆ ನಾನು ಅವರ ಪಾದಗಳಮೇಲೆ ಬಿದ್ದು ಅರಮನೆಗೆ ಬರು ವಂತೆ ಸೆರಗೊಡ್ಡಿ ಬೇಡಿಕೊಳ್ಳುವೆನು.

**ಪಂಡಿತರಾವ್**—ತಾಯಿ, ಇದು ತಾನೇ ಈಗ ಅವಶ್ಯ ಕರ್ತವ್ಯವು. ಹಾಗೆಯೇ ಆಗಲಿ, ತಮ್ಮ ಅಪ್ಪಣೆಯಂತೆಯೇ ತಮ್ಮನ್ನು ಮಹಾ ರಾಜರ ಸನ್ನಿಧಿಗೆ ಕರೆದುಕೊಂಡು ಹೋಗುವೆನು.

**ಸಯಿರಾಬಾಯಿ**—ಆಗಲಿ, ಇನ್ನು ಎಲ್ಲ ವಿಚಾರಗಳನ್ನೂ ಅತ್ತೆಯವರಿಗೂ ತಿಳಿಸಿ ಅವರಪ್ಪಣೆಯನ್ನು ಪಡೆದು ಹೊರಡೋಣ. ನೀವು ಪ್ರಯಾಣ ಸನ್ನಾಹಗಳನ್ನು ಏರ್ಪಡಿಸಿ.

**ಪಂಡಿತರಾವ್**—ಆಜ್ಞೆ. **(ಹೋಗುವರು.)**

## ಸ್ಥಾನ ೨ — ಅರಣ್ಯ

**(ಶಿವಾಜಿಯು ಭಜನೆಮಾಡುತ್ತ ಪ್ರವೇಶಿಸುವನು.)**

**೧೯**

**ಶಿವಾಜಿ**—ಆಹಾ! ಪರಿಶುದ್ಧಾತ್ಮನಾದ ತುಕಾರಾಮ ಮಹನೀಯ ನಲ್ಲವೆ ಧನ್ಯನು. ಸತ್ಯವೂ, ಭಕ್ತಿಯೂ, ಜ್ಞಾನವೂ, ವೈರಾಗ್ಯವೂ ಒಟ್ಟಿಗೆ ಸೇರಿ ಮೂರ್ತೀಭವಿಸಿದಂತೆ ಕಂಗೊಳಿಸುವ ಇಂತಹ ಮಹಾ ಪುರುಷನು ಪ್ರಕೃತಕ್ಕೆ ಈ ಲೋಕದಲ್ಲಿ ಮತ್ತೆ ಯಾವನು ತಾನೇ ಇರುವನು! ಆತನ ದೃಷ್ಟಿಯಲ್ಲಿ ಪರಿಪೂರ್ಣ ವಾತ್ಸಲ್ಯವೂ ಮುಖದಲ್ಲಿ ಅಮೃತವೂ ಚಿತ್ತದಲ್ಲಿ ಶಾಂತಿಯೂ ಸಹ ತುಂಬಿ ತುಳುಕುತ್ತಿರುವುವು. ಆತನ ಮುಖವು ಸದಾ ಪ್ರಸನ್ನವಾಗಿಯೂ ಆನಂದಮಯವಾಗಿಯೂ

ಇರುವುದು. ಆತನ ದರ್ಶನ ಸ್ಪರ್ಶನಗಳಲ್ಲಿ ಅಜ್ಞಾನ ರುಜಾ ಪರಿಹಾರಕವಾದ ಮತ್ತು ಜ್ಞಾನಾಮೃತ ವರ್ಧಕವಾದ ಸಂಜೀವನವೇ ಇರುವುದು. ನನ್ನ ಪೂರ್ವ ಪುಣ್ಯ ವಿಶೇಷದಿಂದ ನನಗೆ ಆ ಮಹಾನುಭಾವನ ಅನುಗ್ರಹವುಂಟಾಗಿ ನನ್ನಲ್ಲಿದ್ದ ಉಚ್ಛೃಂಖಲ ವೃತ್ತಿಯು ಆತನ ದಿವ್ಯೋಪದೇಶದಿಂದ ಮಾಯವಾಯಿತು. ಸಕಲ ಪ್ರಪಂಚವೇ ನನ್ನ ವಶವಾದಂತೆ ನನಗೆ ತೃಪ್ತಿ ಸಂತೋಷಗಳುಂಟಾಗಿರುವವು. ಇನ್ನು ಈ ದುಃಖಮಯವಾದ ಈ ಭೂಮಿಯ ರಾಜ್ಯಭಾರದಲ್ಲಿ ನನಗೆ ಅಭಿಲಾಷೆಯು ಲೇಶವೂ ಇಲ್ಲ. ತಾಯಿ, ತಂದೆ, ಪತ್ನಿ, ಪುತ್ರರು, ಮಿತ್ರರು, ಬಂಧುಗಳೆಂಬ ಬಂಧನಗಳ ಬಾಧೆಯೇ ನನಗೆ ಬೇಕಿಲ್ಲ. ಮಹಾತ್ಮ ತುಕಾರಾಮ ಗುರು ಮಹಾರಾಜನ ಪ್ರಿಯವಾದ ಸಹವಾಸವೂ, ಪವಿತ್ರವಾದ ಉಪದೇಶವೂ, ನಿರುಪಾಧಿಕವಾದ ಈ ಕಾಂತಾರದಲ್ಲಿ ಶಾಂತಮನದಿಂದ ಶ್ರೀಕಾಂತನ ಏಕಾಂತ ಚಿಂತನೆಯೂ ಇವುಗಳೇ ನನಗೆ ಪರಮಾನಂದದಾಯಕಗಳಾಗಿ ನನ್ನಲ್ಲಿ ಜ್ಞಾನ ಪ್ರಭೆಯನ್ನು ವಿಸ್ತರಿಸುತ್ತಿರುವವು. ಆಹಾ! ಗುರು ಮಹಿಮೆಯು ಅಗಾಧವಾದುದಲ್ಲವೇ ?

ವೃ॥ ಪರಿದಿರೆ ಕಾಮಮೋಹ ತಿಮಿರಂ ನಿಜ ತೇಜವ ಬೀರಿ ಶಿಷ್ಯ ಹೃ।
ತ್ಸರಸಿಜ ಕುಟ್ಮಲಂಗಳನರಲ್ಚುತೆ ಸತ್ಪಥದರ್ಶಿಯಾಗಿ ಬಿ॥
ತ್ತರಿಸಿ ನಿಜ ಪ್ರಭಾವವನೆ ಪುಣ್ಯ ಫಲಂಗಳನಿತ್ತು ಪಾಲಿಪಾ।
ಗುರುವರನಂಧಕಾರ ಹರ ಭಾಸುರ ಭಾಸ್ಕರನಲ್ತೆ ಲೋಕದೊಳ್॥
॥೧೫॥

(ಪಂಡಿತರಾವ್, ಹಿರೋಜಿ ಸಹ ರಾಣಿ ಸಯಿಬಾಯಿಯೊಡನೆ ಪ್ರವೇಶಿಸುವರು.)

**ಪಂಡಿತರಾವ್**—ಅದೋ, ದೇವಿಯವರೇ, ಮಹಾರಾಜರವರಿಲ್ಲಿಯೇ ಇರುವರು. ಅವರ ಪಾದಗಳನ್ನು ಹಿಡಿದು ತಾವೇ ಅವರನ್ನು ಪ್ರಾರ್ಥಿಸಿ ಕರೆತರಬೇಕು.

**ಸಯಿರಾಬಾಯಿ**—( ಶಿವಾಜಿಯ ಬಳಿಗೆ ಬಂದು ಆತನ ಪಾದಗಳ ಮೇಲೆ ಬಿದ್ದು ) (೨೦) ಮಹಾಸ್ವಾಮಿಾ, ತಮ್ಮ ಅಪ್ಪಣೆಯಿಲ್ಲದೆ ನಾನು ಇಲ್ಲಿಗೆ ಬಂದು ದಕ್ಕಾಗಿ ಮೊದಲು ತಮ್ಮ ಕ್ಷಮೆಯನ್ನು ಬೇಡುವೆನು. ಪ್ರಿಯಾ, ಸಾಧು ಮಹಾರಾಜರ ಸಂದರ್ಶನ ಮಾಡಿಕೊಂಡು ಬರುವುದಾಗಿ ಹೇಳಿ ದಯಮಾಡಿಸಿದವರು ಮತ್ತೆ ಅರಮನೆಗೆ ಹಿಂದಿರುಗದೆ ಈ ರೀತಿ ವೈರಾಗ್ಯವನ್ನು ಧರಿಸಿ ನಮ್ಮನ್ನು ಕೈ ಬಿಡಬಹುದೇ! ಈಗಲಾದರೂ ದಯೆಯಿಂದ ನಮ್ಮನ್ನು ಕಟಾಕ್ಷಿಸಿ ಮನೆಗೆ ದಯಮಾಡಿಸಬೇಕು.

**ಶಿವಾಜಿ**—ಎಲೌ ಮುಗ್ಧೇ! ಮನೆ! ಮನೆ!! ಯಾವ ಮನೆ? ಯಾರ ಮನೆ? ಈಗ ಆ ಮನೆ ಮಠಗಳ ಸುದ್ದಿ ನನಗೇಕೆ? ಇದೇ ನನ್ನ ಮನೆ, ಈ ಅರಣ್ಯವೇ ನನ್ನ ಮಠ, ನಾನೊಬ್ಬನೇ ನನ್ನ ಸಂಸಾರ. ಹೀಗಿರುವಲ್ಲಿ ನೀನು ಯಾರು? ನಾನು ಯಾರು? ನಿನಗೂ ನನಗೂ ಇನ್ನು ಯಾವ ಸಂಬಂಧವಿದೆ?

**ಸಯಿರಾಬಾಯಿ**—ಆರ್ಯಪುತ್ರಾ! ಇದು ಏನು? ಪ್ರಾಪಂಚಿಕ ಧರ್ಮಗಳನ್ನೂ ಗೃಹಸ್ಥ ಕರ್ತವ್ಯಗಳನ್ನೂ ರಾಜನೀತಿಗಳನ್ನೂ ತತ್ವ ವಿಚಾರಗಳನ್ನೂ ಬಲ್ಲ ಪರಮ ವಿವೇಕನಿಧಿಗಳೆನಿಸಿದ ತಾವು ಈ ರೀತಿಯಾಗಿ ಹೇಳಬಹುದೇ? ನಾನು ತಮ್ಮ ಧರ್ಮಪತ್ನಿಯಲ್ಲವೇ? ಪತಿ ಪಾದ ಸೇವೆಯನ್ನು ಮಾಡಲಾತುರಳಾದ ಪತ್ನಿಯ ಧರ್ಮವನ್ನು ರಕ್ಷಿಸುವುದು ಪತಿಯ ಧರ್ಮವಲ್ಲವೇ? ನಾವುಗಳು ನಮ್ಮ ಕರ್ತವ್ಯಗಳನ್ನು ಬಿಡಬಹುದೇ? ಇದೋ ತಮ್ಮ ಪಾದಗಳಿಗೆರಗಿ ಕ್ಷಮೆಯನ್ನು ಬೇಡುವೆನು. ತಾವು ನನ್ನನ್ನು ಅನಾಥಳನ್ನಾಗಿ ಮಾಡಲಾಗದು.

**ಶಿವಾಜಿ**—ಅನಾಥರಿಗೆ ನಾಥನು ಪರಮೇಶ್ವರನು! ಆತನನ್ನು ನೀನು ಮರೆಹೊಗಬೇಕು.

**ಸಯಿರಾಬಾಯಿ**—ನಿಜ, ಅದಕ್ಕಾಗಿಯೇ ತಮ್ಮ ಮರೆಯನ್ನು ಹೊಕ್ಕಿರುವೆನು. ತಾವೇ ನನಗೆ ನಾಥನು. ತಾವೇ ನನಗೆ ಪರಮೇಶ್ವರನು.

**ಶಿವಾಜಿ**—(ಆತ್ಮ) ಆಹಾ! ದೇಹ ಸುಖಕ್ಕಾಗಿ ಅಜ್ಞಾನದಿಂದ ಕಟ್ಟಿಕೊಳ್ಳುವ ಈ ಹಾಳು ಸಂಸಾರದಿಂದ ಆತ್ಮಸುಖಕ್ಕೆ ಎಷ್ಟು ಪ್ರತಿ

ಬಂಧಕವಾಗುವುದು ! ಇದನ್ನು ಮೊದಲೇ ತಿಳಿಯದೆ, ಮಾಯಾ ಪಾಶಬದ್ಧರಾಗಿ, ಸ್ವಪ್ನದಂತೆ ನಿಜ ಭ್ರಾಂತಿಯನ್ನು ತೋರುವ ಸಂಸಾರ ಸುಖದಿಂದ ಬೆರಗಾಗಿ ಜನರು ಜ್ಞಾನಮಾರ್ಗವನ್ನು ಗಮನಿಸದೆ, ಅಸ್ಥಿರವಾದ ದೇಹಸುಖದಲ್ಲಿ ಮಗ್ನರಾಗಿ ಆತ್ಮಸುಖವನ್ನು ಭಗ್ನ ಮಾಡಿಕೊಳ್ಳುವರು. ಆಹಾ ! ಸಂಸಾರ ಮಾಯೆಯು ಅತಿ ವಿಚಿತ್ರ ವಾದುದು. ಆದಿಯಲ್ಲಿ ಪ್ರಮೋದ, ಅಂತ್ಯದಲ್ಲಿ ಪ್ರಮಾದ ; ಮೊದಲು ವಿಲಾಸ, ಕಡೆಗೆ ವಿಲಾಪ ; ಪ್ರಾರಂಭದಲ್ಲಿ ಪ್ರತಾಪ, ಪರಿಣಾಮದಲ್ಲಿ ಪರಿತಾಪ. ಹೀಗಿರುವ ಸಂಸಾರವೆಂಬ ಸೆರೆಗೆ ನರನನ್ನು ಸಿಲ್ಕಿಸುವ ಆ ಸ್ತ್ರೀಯೆಂಬ ಮಾಯಾಮೂರ್ತಿಯ ತರಳ ಕಟಾಕ್ಷ ವೀಕ್ಷಣಮಾತ್ರ ದಿಂದ ಪುರುಷನು ಚಪಲನಾಗಿ ಕಡೆಗೆ ವಿಫಲನಾಗುವನು. ಅವಳ ಭಾಷಣವೇ ಭೂಷಣವೆಂದು ಬಯಸಿ ಕಡೆಗೆ ಜನ್ಮದೂಷಣವನ್ನು ಮಾಡಿಕೊಳ್ಳುವನು. ಆದಿಯಲ್ಲಿ ಆನಂದ ಸುಧಾ ಸರೋವರವೆಂದು ಪ್ರವೇಶಿಸಿದ ಅಂಗನೆಯ ಲೀಲೆಯು ಅಂತ್ಯದಲ್ಲಿ ವಿಷಸಾಗರವೆಂದು ತಿಳಿದು ಪಶ್ಚಾತ್ತಾಪಪಡುವನು. ಈ ತತ್ವವನ್ನು ಅರಿತ ನಾನು ಇನ್ನು ಸಂಸಾರಕ್ಕೆ ಪ್ರವೇಶಿಸುವುದೆಂದರೇನು ! ಸಾಕು ! ಸಂಸಾರ ಸುಖವು. ದೇವೀ, ನೀವು ಹೊರಡಿರಿ. ನಿಮ್ಮ ಅರಮನೆಯೂ ನಿಮ್ಮ ಸಹವಾಸವೂ ರಾಜಭೋಗಯುಕ್ತವಾದರೂ ಮಹಾ ಕಂಟಕ ಮಯವಾದುದು. ಆದುದರಿಂದ ನಾನು ಅಲ್ಲಿಗೆ ಬರಲೊಲ್ಲೆನು. ನೀವು ಹೊರಡಿ.

**ಸಯಿಾಬಾಯಿ**—**(ದುಃಖದಿಂದ)** ಪ್ರಿಯಾ, ಇನ್ನೂ ತಮ್ಮಿಂದ ಪ್ರಪಂಚದ ಜನರು ಎಷ್ಟೋ ಸುಖವುಂಟಾಗುವುದೆಂದು ನಿರೀಕ್ಷಿಸಿಕೊಂಡಿರುವಲ್ಲಿ ಈಗಲೇ ತಾವು ಈ ರೀತಿಯಾಗಿ ವೈರಾಗ್ಯವನ್ನವಲಂಬಿಸಬಹುದೇ ? ತಮ್ಮ ಪೋಷಣೆಯನ್ನು ಬಯಸಿರುವ ಪ್ರಜೆಗಳನ್ನೂ, ತಮ್ಮನ್ನೇ ಪರ ದೈವವೆಂದು ನಂಬಿರುವ ಪತ್ನಿಯಾದ ನನ್ನನ್ನೂ ತಾವು ಈ ರೀತಿ ಕೈಬಿಡಬಹುದೇ ! ಅಲ್ಲದೆ ಗಳಿತ ವಯಸ್ಕರಾದ ತಮ್ಮ ಮಾತೆಯವ ರನ್ನು ದೂರೀಕರಿಸಿ ತಾವು ಅವರಿಗೆ ಮುಪ್ಪಿನಲ್ಲಿ ದುಃಖವನ್ನುಂಟು ಮಾಡಬಹುದೇ ?

**ಶಿವಾಜಿ**—ನಿಮಗೆಲ್ಲರಿಗೂ ದುಃಖವುಂಟಾಗುವುದು ಅಜ್ಞಾನದಿಂದಲ್ಲದೆ ಬೇರೆಯಿಲ್ಲ. ನನ್ನಂತೆ ನಿಮಗೂ ಸಂಸಾರ ಸ್ವರೂಪವೇನೆಂಬುದು ತಿಳಿದು ಜ್ಞಾನೋದಯವಾದರೆ ಆಗ ನಿಮಗೂ ಹೀಗೆಯೇ ಸಂಸಾರ ದಲ್ಲಿ ವಿರಕ್ತಿಯೂ, ನಿತ್ಯಾನಂದ ದಾಯಕವಾದ ಭಗವದ್ಧ್ಯಾನದಲ್ಲಿ ಆಸಕ್ತಿಯೂ ಉಂಟಾಗುವವು.

**ಸಯಿರಾಬಾಯಿ**—ಪ್ರಿಯಾ, ಆದರೆ ಪ್ರಪಂಚ ಸಂಪರ್ಕದಲ್ಲಿ ಇನ್ನೂ ಕೆಲವು ಕಾಲವಿದ್ದು ಅನಂತರ ಈ ವೈರಾಗ್ಯವನ್ನವಲಂಬಿಸಬಾರದೇ ?

**ಶಿವಾಜಿ**—ಅಯ್ಯೋ ಮರುಳೇ, ಇನ್ನೂ ಕೆಲವು ಕಾಲ ಪ್ರಪಂಚ ವ್ಯಾಪಾರದಲ್ಲಿರಬೇಕೇ ? ಈ ಶರೀರವು ಇನ್ನು ಅರಗಳಿಗೆಯೊಳಗೇನಾ ಗುವುದೆಂಬುದನ್ನು ನಾವು ಬಲ್ಲೆವೇ ? ಈ ದೇಹವು ಶಾಶ್ವತವೇ ? ಇವನ್ನು ನಂಬಿ ನಾವು, ಒದಗಿದ ವೈರಾಗ್ಯವನ್ನು ತೊರೆದು ಮತ್ತೆ ದುಃಖಮಯವಾದ ಸಂಸಾರ ನರಕಕ್ಕೆ ಬೀಳಬಹುದೇ ? ಮಣ್ಣಿನ ಮಡಕೆಯಂತೆ ಯಾವಾಗಲೋ ಒಡೆದುಹೋಗುವ ಈ ದೇಹದ ಮೇಲೆ ನಾನು, ನನ್ನದೆಂಬ ಅಭಿಮಾನವೇಕೆ ? ಈಗ ಕಳೆಯುತ್ತಿರುವ ಕಾಲವು ನಮ್ಮದೆಂದು ತಿಳಿದು ಆ ಕಾಲವನ್ನೂ ಈ ಕಾಯವನ್ನೂ ಪರಮಾರ್ಥ ಸುಖ ಸಾಧನ ಕಾರ್ಯಗಳಿಗೆ ಉಪಯೋಗಿಸಿ, ನಿತ್ಯ ಸುಖಾರ್ಜನೆ ಮಾಡುವುದೇ ಪ್ರತಿಯೊಬ್ಬರ ಕರ್ತವ್ಯವು. ಹಾಗಿಲ್ಲದೆ ಆಹಾರ ನಿದ್ರಾದಿ ಸುಖ ವಿಷಯಗಳಲ್ಲಿ ಮಾತ್ರನೇ ಮಗ್ನರಾಗಿರು ವುದು ಪಶುವೃತ್ತಿಯಲ್ಲದೆ ಬೇರೆಯಿಲ್ಲ. ಸಕಲೇಂದ್ರಿಯಗಳನ್ನೂ ಪರಮಾತ್ಮನ ಸೇವೆಗೆ ಉಪಯೋಗಿಸುವವನ ಜನ್ಮವೇ ಸಾರ್ಥಕವು. ಹರಿ ಸೇವೆ ಮಾಡದಿರುವ ದೇಹವೇ ಶವದ ದೇಹವು. ಹೀಗಿರುವಲ್ಲಿ ಇಷ್ಟು ದಿನಗಳು ಈ ಶವ ಸ್ವರೂಪವಾದ ದೇಹವನ್ನು ನಾವು ಕಾಪಾಡಿ ದರೂ ಮನಸ್ಸು ಸ್ಥಿರವಾಗಲಿಲ್ಲ. ಆತ್ಮವು ಗೋಚರವಾಗಲಿಲ್ಲ. ಈಗ ಮಹನೀಯರಾದ ತುಕಾರಾಮ ಗುರುವರ್ಯರ ದಿವ್ಯೋಪದೇಶ ದಿಂದ ನನ್ನ ಮನೋ ನೇತ್ರಗಳು ತೆರೆದವು. ಮನೋಹರವಾದ ಕೀರ್ತನ ಗಳಲ್ಲಿ ಚಿತ್ತವು ಕುತೂಹಲಗೊಂಡಿತು. ವಾಣಿಯು ನಾರಾಯಣನ

ಗುಣಗಳನ್ನು ಗಾನಮಾಡಲು ಉಪಯೋಗವಾಯಿತು. ಶರೀರಕ್ಕೆ ನಿಜ ಜೀವಕಳೆಯು ಬಂತು. ಅಹಂಕಾರವಡಗಿತು. ಸೋಹಂ ತತ್ವವು ಸಿಕ್ಕಿತು. ಇದರಿಂದ ನನ್ನ ಜನ್ಮವೇ ಬೇರೆಯಾಗಿ, ನಿಮಗೂ ನನಗೂ ಇದ್ದ ಬಂಧನವು ಹರಿದುಹೋಯಿತು. ಇನ್ನು ನಿನ್ನ ಮಾರ್ಗವು ಬೇರೆ, ನನ್ನ ಮಾರ್ಗವು ಬೇರೆ. ಹೊರಡು, ನನ್ನನ್ನು ಪೀಡಿಸಬೇಡ. (**ಸಯಿಬಾಯಿಯನ್ನು ಪಕ್ಕಕ್ಕೆ ನೂಕಿ ಹೊರಟುಹೋಗುವನು.**)

**ಸಯಿಬಾಯಿ**—(**ಮೂರ್ಛೆ ಬೀಳುವಳು.**)

**ಪಂಡಿತರಾವ್**—(**ಹಿರೋಜಿಯನ್ನು ನೋಡಿ**) ಹಿರೋಜೀ, ನಮ್ಮ ಪ್ರಯತ್ನವು ವ್ಯರ್ಥವೇ ಆಯಿತು. ಮುಂದೆ ಏನು ಮಾಡುವುದು? ಸಾಧು ಸಂದರ್ಶನದಿಂದ ಜನರಿಗೆ ಕ್ಲೇಶಗಳು ಪರಿಹಾರವಾಗಬೇಕಲ್ಲದೆ, ಇಂತಹ ಅನರ್ಥಪರಿಣಾಮವಾಗಬಹುದೇ?

**ಹಿರೋಜಿ**—ಪಂಡಿತರಾಯರೇ, ಮೊದಲೇ ಭಕ್ತಿಪರವಶನಾಗಿದ್ದ ನಮ್ಮ ಮಹಾರಾಜನಿಗೆ ಆ ತುಕಾರಾಮರ ಉಪದೇಶದಿಂದ ಮನಸ್ಸು ಕೇವಲ ಪಾರಮಾರ್ಥಿಕ ಮಾರ್ಗವನ್ನು ಹಿಡಿದುದರಿಂದ ಈ ಅನರ್ಥವು ಸಂಭವಿಸಿತು; ಈಗಲೂ ಆ ತುಕಾರಾಮರ ಉಪದೇಶದಿಂದಲೇ ಈತನು ನಮ್ಮ ಮಾರ್ಗಕ್ಕೆ ಬರಬೇಕಲ್ಲದೆ ಆತನ ಚಿತ್ತವನ್ನು ತಿರುಗಿಸಲು ನಮ್ಮಿಂದ ಸಾಧ್ಯವಾಗಲಾರದು.

**ಸಯಿಬಾಯಿ**—(**ಮೂರ್ಛೆಯಿಂದೆದ್ದು**) ಅಯ್ಯೋ! ಆರ್ಯಪುತ್ರನು ಕಡೆಗೂ ನಿಷ್ಠುರೋಕ್ತಿಗಳನ್ನಾಡಿ ವಿರಕ್ತನಾಗಿ ಹೊರಟೇ ಹೋದನಲ್ಲಾ! ಪರಮೇಶ್ವರಾ! ನನ್ನ ಪ್ರಾರ್ಥನೆಯೆಲ್ಲವೂ ವ್ಯರ್ಥವಾಯಿತೇ! (**ಪಂಡಿತರಾಯರನ್ನು ನೋಡಿ**) ಪಂಡಿತರಾಯರೇ, ಕಡೆಗೂ ನನ್ನ ಪ್ರಿಯನು ಹೊರಟೇ ಹೋದನು. ಆತನು ಹೋದಲ್ಲಿಗೇ ನಾನೂ ಹೋಗಲೇ ಬೇಕು. ನನಗೆ ಆತನ ಚರಣವಲ್ಲದೆ ಬೇರೆ ಗತಿಯಿಲ್ಲ. ಆದುದರಿಂದ ನೀವೆಲ್ಲರೂ ನಗರಕ್ಕೆ ಹೋಗಿ, ಇಲ್ಲಿ ನಡೆದ ವಿಚಾರವೆಲ್ಲವನ್ನೂ ಆರ್ಯೆಯಾದ ಮಹಾರಾಣಿಯವರಿಗೆ ತಿಳಿಸಿ, ಅವರಿಗೆ ನನ್ನ ನಮಸ್ಕಾರಗಳನ್ನು ಹೇಳಿ; ಈ ನನ್ನ ನಿರ್ಭಾಗ್ಯ ಮುಖವನ್ನು ನಾನು

ಆಕೆಗೆ ತೋರಿಸಲಾರೆನು. ನನ್ನ ಪ್ರಿಯನು ಪ್ರಪಂಚಾಭಿಮಾನವನ್ನು ಬಿಟ್ಟನು, ನಾನೂ ಬಿಟ್ಟೆನು. ಆತನು ವನವಾಸಿಯು; ನಾನು ಆತನ ಸಹವಾಸಿಯು. ಆತನ ಮಾರ್ಗವೇ ನನ್ನ ಮಾರ್ಗ. ಆದುದರಿಂದ ನಾನು ಆತನನ್ನೇ ಅನುವರ್ತಿಸಿ ಹೋಗುವೆನು. ಇನ್ನು ನೀವುಗಳು ಪುರದ ಮಾರ್ಗವನ್ನು ಹಿಡಿಯಿರಿ. **(ಹೋಗುವಳು.)**

**ಪಂಡಿತರಾವ್**—ದೇವಿಯವರೇ, ದೇವಿಯವರೇ, ಸ್ವಲ್ಪ ನಿಲ್ಲಿ, ಸ್ವಲ್ಪ ನಿಲ್ಲಿ. ಇಂತಹ ಸಾಹಸಕಾರ್ಯವು ಸಮನಲ್ಲ. **(ಹಿರೋಜಿಯನ್ನು ನೋಡಿ)** ಹಿರೋಜೀ, ದೇವಿಯವರು ನಿಲ್ಲುವಂತಿಲ್ಲ. ಆಹಾ! ಪತಿವ್ರತಾ ಶಿರೋಮಣಿಯೇ, ನಿನ್ನ ಸ್ಥೈರ್ಯವೇ ಸ್ಥೈರ್ಯ, ನಿನ್ನ ಧೈರ್ಯವೇ ಧೈರ್ಯ, ನಿನ್ನ ಪತಿಭಕ್ತಿಯೇ ಪತಿಭಕ್ತಿ! ಪರಮಾತ್ಮನು ನಿಮ್ಮಿಬ್ಬರಿಗೂ ಮಂಗಳವನ್ನುಂಟುಮಾಡಲಿ. ಹಿರೋಜೀ, ಇನ್ನು ನಾವೀಕೆಯನ್ನು ನಮಸ್ಕರಿಸಿ ನಿಲ್ಲಿಸಿ, ಹೇಗಾದರೂ ನೀನು ಹೇಳಿದಂತೆ ತುಕಾರಾಮ ಸಾಧುಗಳ ಸನ್ನಿಧಿಗೆ ಕರೆದುಕೊಂಡು ಹೋದರೆ, ಅವರು ಈ ಅನರ್ಥವನ್ನು ಕ್ರಮಪಡಿಸುವರು. ಆದುದರಿಂದ ಬೇಗನೆ ಹೋಗಿ ಆಕೆಯನ್ನಲ್ಲಿಗೆ ಕರೆದುಕೊಂಡು ಹೋಗೋಣ.

**ಹಿರೋಜಿ**—ಹಾಗೆಯೇ ಆಗಲಿ, ನಡೆಯಿರಿ. ಇದೇ ಸಮಯೋಚಿತವಾದ ಉಪಾಯ. **(ಹೋಗುವರು.)**

## ಸ್ಥಾನ ೩—ತುಕಾರಾಮನ ಮನೆ

**(ಜಿಜಾಬಾಯಿ ಮಲಗಿರುವಳು, ತುಕಾರಾಮನು ಭಜನೆ ಮಾಡುತ್ತ ಕುಳಿತಿರುವನು.)**

**ತುಕಾರಾಮ**— ೨೧

**ಕಂ||** ಜಯ ಪಾಂಡುರಂಗ ವಿಠಲಾ।
ಜಯ ನಿರ್ಜಿತ ಸಕಲ ಕುಟಿಲ ದಾನವ ಪಟಲಾ ||
ಜಯ ಹಿಮಕರ ಸಮನಿಟಿಲಾ।
ಜಯ ಲಕ್ಷ್ಮೀಲೋಲ ನಿತ್ಯ ಮಂಗಳ ವಿಠಲಾ ||೧೭||

**ಜಿಜಾಬಾಯಿ**—(ಎದ್ದು ಕುಳಿತು) ಅಯ್ಯೋ ಗ್ರಹಚಾರವೇ, ವಿಠಲ, ವಿಠಲ, ವಿಠಲ. ನಿಮ್ಮ ಕಾಟದಿಂದ ಆ ವಿಠಲನು ಮನೆಯಲ್ಲಿ ಮಲಗಿಕೊಳ್ಳಲೇ ಬೇಡವೇ? ನಿಮಗೆ ನಿದ್ದೆ ಬಾರದಿದ್ದರೆ ಅವನಿಗೂ ನಿದ್ದೆ ಬೇಡವೇ? ಅವನನ್ನೇತಕ್ಕೆ ಕೂಗಿ ಕೂಗಿ ಗದ್ದಲ ಮಾಡುವಿರಿ? ಆತನ ಪತ್ನಿಯಾದ ಆ ಲಕ್ಷ್ಮೀ ದೇವಿಯು ಏನೆಂದುಕೊಂಡಾಳು! ನಿಮ್ಮನ್ನೆಷ್ಟು ಬೊಯ್ದಾಳು! ಅಥವಾ ನಿಮ್ಮನ್ನು ಎಷ್ಟು ಶಪಿಸಿಬಿಟ್ಟಾಳು?

**ತುಕಾರಾಮ**—(ನಕ್ಕು) ಎಲೌ! ಆ ಮಹಾ ಲಕ್ಷ್ಮೀದೇವಿಯು ನಮ್ಮ ತಾಯಿಯು; ಮಗನಾದ ನನ್ನನ್ನು ಎಂದಿಗೂ ಬೊಯ್ಯಲಾರಳು; ಎಂದೆಂದಿಗೂ ಶಪಿಸಲಾರಳು.

**ಜಿಜಾಬಾಯಿ**—ತಾಯಿಯಾದರೇನು! ಅಕಾಲದಲ್ಲಿ ಗದ್ದಲಮಾಡಿದರೆ ಆಕೆ ಎಂದಿಗೂ ಸುಮ್ಮನಿರಲಾರಳು.

**ತುಕಾರಾಮ**—ಆ ನಮ್ಮ ಮಹಾಲಕ್ಷ್ಮೀದೇವಿಯು ಈ ತುಕಾರಾಮನ ಮನೆಯ ದರಿದ್ರ ಲಕ್ಷ್ಮಿಯು ಹಾಗಲ್ಲವೆಂದು ತಿಳಿ.

**ಜಿಜಾಬಾಯಿ**—(ಕೋಪದಿಂದ) ಸಾಕು ಸುಮ್ಮನಿರಿ; ನಿಮ್ಮನ್ನು ಕೈಹಿಡಿದವಳು ಭಾಗ್ಯ ಲಕ್ಷ್ಮಿಯಾದರೂ ದರಿದ್ರ ಲಕ್ಷ್ಮಿಯೇ ಆಗುವಳು. ನಿಮ್ಮನ್ನು ಮದುವೆಯಾದುದಕ್ಕೆ ಹೊಟ್ಟೆ ತುಂಬ ಅನ್ನವಿಲ್ಲದಿದ್ದರೂ ಕಣ್ಣು ತುಂಬ ನಿದ್ದೆಹೋಗೋಣವೆಂದರೂ ಅದಕ್ಕೂ ಈ ಹಾಳು ವಿಠಲನ ಹಾವಳಿ.

**ತುಕಾರಾಮ**—ಎಲೌ, ನಮ್ಮ ವಿಠಲನ ಸುದ್ದಿಯು ನಿನಗೆ ಬೇಡ; ಸುಮ್ಮನೆ ಒಳಗೆ ಹೋಗಿ ಮಲಗು. ನಾನು ಭಜನೆ ಮಾಡಿಕೊಳ್ಳುವೆನು.

**ಜಿಜಾಬಾಯಿ**—ಭಜನೆಯಾದರೂ ಮಾಡಿಕೊಳ್ಳಿ, ಅಳಲಾದರೂ ಅತ್ತುಕೊಳ್ಳಿ, ನನಗೆ ನಿದ್ದೆ ಬರುವುದು. ನಾನು ಹೋಗಿ ಮಲಗಿಕೊಳ್ಳುವೆನು. (ಆತ್ಮಗತ) ತಾಯಿಾ, ಮಂಗಳಾದೇವೀ! ನನಗೆ ಈ ಕಷ್ಟವನ್ನು ಯಾವಾಗ ತಪ್ಪಿಸುವೆಯಮ್ಮಾ! (**ಆಕಳಿಸುತ್ತ ಹಾಸಿಗೆಯನ್ನು ಸುತ್ತಿಕೊಂಡು ಒಳಕ್ಕೆ ಹೋಗುವಳು.**)

**ತುಕಾರಾಮ**—(ಭಜನೆ ಮಾಡುತ್ತಿರುವನು.)

|| ಸೀಸಪದ್ಯ ||

ಪರಮ ಪಾವನದೇವ ಪಾಂಡುರಂಗನೆ ನಿನ್ನ | ಸುಕರ ನಾಮವನೆನ್ನ ಮುಖದಿ ನಿಲಿಸಿ |
ದುರಿತ ರಾಜಿಯನೆನಗೆ ದೂರವಾಗಿರಿಸುತಲಿ | ಪುಣ್ಯ ಕೃತಿಗಳಗೆಯ್ಸಿ ಭೂಮಿ ತಲದಿ ||
ನಿರುತ ಭಕ್ತಿಜ್ಞಾನ ನಿಶ್ಚಲ ವಿರಕ್ತಿ ಸಾಂ | ರಾಜ್ಯ ಸುಖವನೆ ತಳೆದು ರಾಜಿಪಂತೆ ||
ಕರುಣಾ ಕಟಾಕ್ಷದಿಂ ನಿರುಕಿಸುತ ನಿನ್ನ ಸಂ | ದರ್ಶನವನೊಲಿದೀವುದನಘಚರಿತ ||೧೭||

|| ಗೀತ ||

ವೇದಗೋಚರಮೂರ್ತಿ ವಿಠಲನಾಂ ನಿನ್ನ |
ಪಾದ ಕಮಲವ ನಂಬಿ ಭಜಿಸಿ ಪೂಜಿಸುವೆ ||
ಸಾಧು ಸಂತತಿನಾಥ ಸರಸ ಗುಣಪೂತ |
ಮೋದಮೀವುದು ನನಗೆ ಮೋಕ್ಷಸಂದಾತ ||೧೮||

**ರಂಭೆ**—(ಮೋಹದ ಹಾಡನ್ನು ಹಾಡುತ್ತ ಪ್ರವೇಶಿಸಿ ನಮಸ್ಕರಿಸುವಳು.) (೨೨)

**ತುಕಾರಾಮ**—ಪಾಂಡುರಂಗ! ಪಾಂಡುರಂಗ (ನಮಸ್ಕರಿಸುವನು.) ಇದು ಏನು? ಇಷ್ಟು ಹೊತ್ತಿನಲ್ಲಿ ಇಲ್ಲಿಗೆ ಬಂದಿರುವಿರಲ್ಲಾ! ನೀವು ಯಾರು? ನನ್ನ ಕೀರ್ತನವನ್ನು ಕೇಳಲು ಬಂದಿರೇನು?

**ರಂಭೆ**—ಇಲ್ಲ! ಇಲ್ಲ!! ನಾನು ನಿಮ್ಮ ಕೀರ್ತನಕ್ಕಾಗಿ ಬರಲಿಲ್ಲ......

**ತುಕಾರಾಮ**—ಓಹೋ! ಹಾಗಾದರೆ ನೀವೇ ಕೀರ್ತನಮಾಡುವಿರೇನು? ಆಗಲಿ; ನೀವೇ ಕೀರ್ತನಮಾಡಿ; ನಾನು ಕೇಳಿ ಆನಂದಪಡುವೆನು.

**ರಂಭೆ**—ಆಗಲಿ; ನಾನೇ ಕೀರ್ತನ ನರ್ತನಗಳನ್ನು ಮಾಡುವೆನು. (೨೩)

**ಕಂ||** ಅನುಪಮ ಗುಣ ಗಂಭೀರಾ |
ವನಿತಾ ಜನಮೋಹನೈಕ ನವ ಶೃಂಗಾರಾ ||
ಮನಸಿಜ ಲಲಿತಾಕಾರಾ |
ಘನ ಸುಖವಂ ಕರುಣಿಸತುಳ ಲೀಲಾಧಾರಾ ||೧೯||

(ಶೃಂಗಾರಭಾವಗಳಿಂದ ಹಾಡುತ್ತ ನರ್ತನಮಾಡುವಳು.)

**ತುಕಾರಾಮ**—ಎಲೌ ! ಇದೇನಿದು ! ಈ ವಿಪರೀತವು ?

**ರಂಭೆ**—ಇದು ಮಂಗಳಕರವಾದ ಭಜನೆಯು.

**ತುಕಾರಾಮ**—ಮಂಗಳಕರವಾದ ಭಜನೆಯೋ ? ಅಮಂಗಳಕರವಾದ ರೋದನವೋ ? ನಿನ್ನ ಕೀರ್ತನ ನರ್ತನಗಳು ದುರ್ಮಾರ್ಗವರ್ತನಗಳಾಗಿವೆಯಲ್ಲಾ ! ಸಾಕು ! ಸಾಕು ! ನಿಲ್ಲಿಸು. ಇದನ್ನು ಕೇಳಿ ನನ್ನ ಕಿವಿಗಳು ಕಿವುಡಾದವು ; ತಲೆಯು ಗಿರ್ರನೆ ಸುತ್ತಲಾರಂಭಿಸಿತು ; ಮನಸ್ಸು ಉರಿಯಹತ್ತಿತು ; ಆತ್ಮವು ಕುದಿಯುತ್ತಿರುವುದು. ಇದರಲ್ಲಿ ನಮ್ಮ ಪಾಂಡುರಂಗನ ಹೆಸರೇ ಇಲ್ಲ. ವಿಠಲನ ಗುಣ ಕೀರ್ತನವಿಲ್ಲ. ನಿರ್ಮಲ ವಿಚಾರಗಳಿಲ್ಲ. ಛೀ ! ಛೀ ! ಛೀ ! ಇಂತಹ ಅಪವಿತ್ರ ಗಾನವು ನನ್ನ ಕಿವಿಗೆ ಬೀಳಲೇ ಕೂಡದು. ಹೊರಡು, ಮೊದಲು ಇಲ್ಲಿಂದಾಚೆಗೆ ಹೊರಡು.

**ರಂಭೆ**—ಸ್ವಾಮಿ, ಗುರುಮಹಾರಾಜರೇ, ತಮ್ಮ ಬಳಿಯಲ್ಲಿ ನನ್ನದೊಂದು ಗೋಪ್ಯವಾದ ಕಾರ್ಯವಿದೆ.

**ತುಕಾರಾಮ**—ಏನು ? ನನ್ನಲ್ಲಿಯೇ ? ಗೋಪ್ಯವೇ ? ಅಯ್ಯೋ ! ನಾನಂತಹ ಗೋಪ್ಯ ವಿಚಾರಗಳ ಮನುಷ್ಯನೇ ಅಲ್ಲವಲ್ಲಾ !

**ರಂಭೆ**—(**ಆತ್ಮಗತ**) ಇವನು ನಿರ್ಗಂಧ ಕುಸುಮವು. ನನ್ನ ಮಾತನ್ನು ಅರ್ಥಮಾಡಿಕೊಳ್ಳಲೇ ಇಲ್ಲ. (**ಪ್ರಕಾಶಂ**) ಸ್ವಾಮಿ, ನಾನು ತಮ್ಮಿಂದ ಉಪದೇಶವನ್ನು ಪಡೆಯಲು ಬಂದಿದ್ದೇನೆ. ಉಪದೇಶವನ್ನು.

**ತುಕಾರಾಮ**—ಏನು ? ನನ್ನಿಂದ ಉಪದೇಶವೇ ? ಅದರಲ್ಲಿಯೂ ಈ ಮಧ್ಯರಾತ್ರಿಯಲ್ಲಿ ? ಈ ಪಿಶಾಚ ನರ್ತನ ಕಾಲದಲ್ಲಿ ?

**ರಂಭೆ**—ಸ್ವಾಮಿ, ಇಂತಹ ಶಾಂತ ಸಮಯದಲ್ಲಿ ಏಕಾಂತ ಸ್ಥಳದಲ್ಲಿ ತಮ್ಮಿಂದ ಉಪದೇಶವನ್ನು ಪಡೆಯಲು ಬಂದಿದ್ದೇನೆ.

**ತುಕಾರಾಮ**—ಓಹೋ ! ಹಾಗೆಯೋ ? ಕೇಳು, ಈ ತುಕಾರಾಮನು ಜಾತಿಯಲ್ಲಿ ವೈಶ್ಯನು. ಆತನು ಯಾರಿಗೂ ಉಪದೇಶವನ್ನು ಕೊಡು

ವುದಿಲ್ಲ. ಕೊಡಲವನಿಗೆ ಅಧಿಕಾರವೇ ಮೊದಲಿಲ್ಲ. ಅದಿರಲಿ; ತಾಯಿಾ, ಅರ್ಧ ರಾತ್ರಿಯಲ್ಲಿ ಹೀಗೆ ದಾರಿತಪ್ಪಿ ಬಂದಿರುವ ಈ ಪಶುವು ಯಾರ ದವ್ವಾ?

**ರಂಭೆ**—ಸ್ವಾವಿಾ, ಯಾರ ಯಾರದೆಂದು ಹೇಳಲಿ?

**ತುಕಾರಾಮ**—ಜನ್ಮಾಂತರಗಳಲ್ಲಿ ಕಳೆದುಹೋದವರ ಹೆಸರುಗಳು ಬೇಡ. ಈಗ ನಿನ್ನ ಒಡೆಯನು ಯಾರು?

**ರಂಭೆ**—ತಾವೇ ಎಂದು ತಿಳಿದುಕೊಳ್ಳಿ.

**ತುಕಾರಾಮ**—(**ಆಶ್ಚರ್ಯದಿಂದ**) ಎಲ! ಎಲ!! ಎಲ!!! ಹೆಂಗಸೇ! ಇವಳೆಲ್ಲವನ್ನೂ ತ್ಯಾಗಮಾಡಿ ಬಂದಿರುವಳು. ಇವಳಿಗೆ ಲಜ್ಜೆಯಿಲ್ಲ; ಮಾನ ಮರ್ಯಾದೆಗಳಿಲ್ಲ; ಜಾತಿ ಕುಲ ಗೋತ್ರಗಳಿಲ್ಲ. ವಯಸ್ಸು ರೂಪಗಳಲ್ಲಿ ದೃಷ್ಟಿಯಿಲ್ಲ. ಬುದ್ಧಿ ವಿವೇಕಗಳಿಲ್ಲ. ಹುಚ್ಚೂ ಅಲ್ಲ. ಇದು ನಾಯಿ ನರಿಗಳು ಕಚ್ಚಿ ತಿನ್ನಬೇಕಾದ ಹೆಣವೇ ಸರಿ! (**ರಂಭೆಯನ್ನು ನೋಡಿ**) ಅವ್ಮಾ, ತಾಯಿಾ,

**ರಂಭೆ**—(**ಕಿವಿಯನ್ನು ಮುಚ್ಚಿಕೊಂಡು**) ಸ್ವಾವಿಾ, ತಾವು ನನ್ನನ್ನು ತಾಯಿಯೆಂದು ಸಂಬೋಧಿಸಬಾರದು.

**ತುಕಾರಾಮ**—ಏತಕ್ಕೆ ಸಂಬೋಧಿಸಬಾರದು?

**ರಂಭೆ**—ನನ್ನ ರೂಪ ಲಾವಣ್ಯ ತಾರುಣ್ಯಗಳನ್ನು ನೋಡಿದರೆ ಅದು ನಿಮಗೆ ಗೊತ್ತಾಗುವುದಿಲ್ಲವೇ?

**ತುಕಾರಾಮ**—(**ಆತ್ಮ**) ಓಹೋ! ಇವಳು ಮೇರೆ ವಿಾರಿದಳು. (**ಪ್ರಕಾಶಂ**) ಅವ್ಮಾ ತಾಯಿಾ, ಈ ರೂಪ ಲಾವಣ್ಯ ತಾರುಣ್ಯಗಳಿಂದ ಕೂಡಿದ ನಾರೀರತ್ನವಾದ ನೀನು ಯಾವನಾದರೂ ಭಾಗ್ಯವಂತನ ಮನೆಗೆ ಸೇರಿದ್ದಲ್ಲಿ ಆತನನ್ನೇ ಅನುಗ್ರಹಿಸಿ ಸುಖಿಯನ್ನಾಗಿ ಮಾಡು; ಹೀಗೆ ಹುಚ್ಚಳಾಗಿ ಮುಚ್ಚುಮರೆಯಿಂದ ತುಚ್ಛಕಾರ್ಯಗಳನ್ನು ಮಾಡಿ ಆತನನ್ನು ವಂಚಿಸಬೇಡ.

**ರಂಭೆ**—ಸರಿ, ಸರಿ, ನಾನು ಈ ಧರ್ಮಶ್ರವಣಕ್ಕಾಗಿ ಬಂದವಳಲ್ಲ. ನನ್ನ ಭಾವವನ್ನು ಮೊದಲೇ ತಮ್ಮಲ್ಲಿ ತಿಳಿಸಿರುವೆನು. ತಾವು ನನ್ನವ ರಾಗಬೇಕು.

**ತುಕಾರಾಮ**—ಎಲೌ! ಈ ನನ್ನ ಶರೀರಕ್ಕೆ ಯಾವ ಬೆಲೆ ತಾನೇ ಇರುವುದು! ಬ್ರಹ್ಮನು ಸೊಟ್ಟ ಸೊಟ್ಟನಾಗಿ ಮಾಡಿಟ್ಟಿರುವ ಈ ಬೊಂಬೆಯಿಂದ ನಿನಗೇನು ಸಂತೋಷವಾದೀತು?

**ರಂಭೆ**—ಅದು ಹೇಗಾದರೂ ಇರಲಿ, ಅದೇ ನನಗತ್ಯಂತ ಪ್ರಿಯವಾಗಿದೆ.

**ತುಕಾರಾಮ**—ಇರಬಹುದು. ನೀನು ಹೀಗೆ ಹೇಳುವುದು ನನಗೆ ಪ್ರಿಯವಾಗಿಲ್ಲವಲ್ಲಾ! ಅದಿರಲಿ, ತಾಯಿಾ, ಅದು ಹೇಗಿದ್ದರೂ ನಿನಗೆ ಅದೇ ಪ್ರಿಯವೆಂದು ಹೇಳಿದೆಯಲ್ಲಾ! ಹೀಗಿರುವಲ್ಲಿ ಈ ತುಕಾರಾಮನನ್ನೇ ಏತಕ್ಕೆ ಬಯಸುವೆ?

**ರಂಭೆ**—ಹಾಗಲ್ಲ ಸಾಧುಗಳೇ!

**ತುಕಾರಾಮ**—ಮತ್ತೆ ಹೇಗೆ ಮಗಳೇ?

**ರಂಭೆ**—ನಾನು ಏಕ ಮನಸ್ಸಿನಿಂದ ತಮ್ಮನ್ನು ಪತಿಯೆಂದು ಭಾವಿಸಿ ಬಂದಿರುವೆನು.

**ತುಕಾರಾಮ**—ಓಹೋ! ಹಾಗಾದರೆ ನೀನು ಮೋಸಹೋದೆ. ನನಗೆ ಮದುವೆಯಾದ ಒಬ್ಬ ಸುಂದರ ಸ್ತ್ರೀ ಇರುವಳು. ಆಕೆಗೆ ಇಬ್ಬರು ಮಕ್ಕಳಿರುವರು. ಈ ಸಂಕೋಲೆಗಳು ನನ್ನ ಕಾಲಿಗೆ ಮೊದಲೇ ಬಿದ್ದಿರುವಲ್ಲಿ, ನೀನು ಕುತ್ತಿಗೆಯ ಮೇಲೆ ಮತ್ತೆ ನೊಗವನ್ನು ಹೊರಿಸಲು ಬಂದೆಯಲ್ಲಾ! ಇದನ್ನು ನಾನೇತಕ್ಕೆ ಹೊತ್ತುಕೊಳ್ಳ ಬೇಕು?

**ರಂಭೆ**—ಏತಕ್ಕೆಂದರೆ ಪ್ರಪಂಚದಲ್ಲಿ ನಿಮಗಿರುವ ದುಃಖವನ್ನು ತೊಲಗಿಸಿಕೊಂಡು ನೀವು ನಿತ್ಯಾನಂದದಿಂದ ಕಾಲವನ್ನು ಕಳೆಯುವುದಕ್ಕಾಗಿ.

**ತುಕಾರಾಮ**—ನಾನು ದುಃಖದಿಂದಿರುವೆನೆಂದು ನಿನಗೆ ಹೇಳಿದವರು ಯಾರು ? ಇರುವುದಕ್ಕೆ ಸುಂದರವಾದ ಮಂದಿರವಿದೆ. ವಿಠಲ ನಾಮಾಮೃತವೆಂಬ ದಿವ್ಯ ಭೋಜನವಿದೆ. ಪಾಂಡುರಂಗನಂತಹ ದಯಾಶಾಲಿಯಾದ ತಂದೆ, ರುಕ್ಮಿಣೀದೇವಿಯಂತಹ ವಾತ್ಸಲ್ಯಯುಕ್ತಳಾದ ತಾಯಿ, ಪುಂಡರೀಕ ನಾಮದೇವ ಜ್ಞಾನದೇವರಂತಹ ಪ್ರಿಯ ಬಂಧು ಮಿತ್ರರು, ಸಂಸಾರದಲ್ಲಿ ವೈರಾಗ್ಯವನ್ನು ಹುಟ್ಟಿಸುತ್ತಿರುವ ಒಬ್ಬ ಪತ್ನಿಯು, ಮುದ್ದು ಮುದ್ದಾಗಿ ಮಾತನಾಡಿ ಮಧುವನ್ನು ಸುರಿಸುತ್ತ, ಸದಾನಂದದಿಂದಿರುವ ಮಕ್ಕಳು ಸಹ ನನಗಿದ್ದಾರೆ. ಇಂತಹ ದಿವ್ಯ ಸಂಸಾರ ಮಧ್ಯದಲ್ಲಿ ನಾನು ಆನಂದದಿಂದ ಕಾಲವನ್ನು ಕಳೆಯುತ್ತಿರುವೆನು.

**ರಂಭೆ**—ಓಹೋ ! ಆನಂದದಿಂದ ಕಾಲವನ್ನು ಕಳೆಯುತ್ತಿರುವಿರೋ ? ಇರಬಹುದು ! ನಿಮ್ಮ ಹೆಂಡತಿಯು ದೊಡ್ಡ ಗಯ್ಯಾಳಿಯೂ ಕರ್ಕಶಳೂ ಎಂದು ಊರೆಲ್ಲರೂ ಹೇಳುತ್ತಿರುವರಲ್ಲಾ !

**ತುಕಾರಾಮ**—ಛೀ ! ಛೀ ! ಅಲ್ಲ, ಎಂದಿಗೂ ಅಲ್ಲ ! ಆಕೆಯು ನನ್ನ ಮನೆಯ ಭಾಗ್ಯಲಕ್ಷ್ಮಿಯು !

**ರಂಭೆ**—ಆಕೆ ನಿಮ್ಮ ಮನೆಯ ಭಾಗ್ಯಲಕ್ಷ್ಮಿಯಿರಲಾರಳು ; ಆ ಭಾಗ್ಯಲಕ್ಷ್ಮಿಯ ಅಕ್ಕನಾದ ದಾರಿದ್ರ್ಯಲಕ್ಷ್ಮಿಯಾಗಿರಬೇಕು.

**ತುಕಾರಾಮ**—ಆಕೆ ಹೇಗಾದರೂ ಇರಲಿ, ನನ್ನ ಕಣ್ಣಿಗೆ ಮಾತ್ರ ಆಕೆಯೇ ಸಂಸಾರದಲ್ಲಿ ಮಹಾಲಕ್ಷ್ಮಿ, ಸಂಭಾಷಣೆಯಲ್ಲಿ ಸರಸ್ವತಿ, ಅನ್ನವಿಡುವಾಗ ಅನ್ನಪೂರ್ಣೆ, ಯೋಗ್ಯವಾದ ಕಾಲದಲ್ಲಿ ರಂಭೆ.

**ರಂಭೆ**—ಆಹಾಹಾ ! ರಂಭೆಯೇಕೆ ! ಜಾಲಿಯ ಮರದ ರೆಂಬೆ ! ಏನೆಂದು ಹೇಳಲಿ ! ಕುರೂಪಿಯೂ ಜಗಳಗಂಟಿಯೂ ಆದ ಅವಳು, ಸೌಂದರ್ಯದಲ್ಲಿ ಸ್ವರ್ಗಲೋಕದ ರಂಭೆಯನ್ನು ಮಿರಿಸಿರುವ ಈ ರಂಭೆಗಿಂತಲೂ ಚೆನ್ನಾಗಿ ಕಾಣುವಳೇ ?

**ತುಕಾರಾಮ—**

**ಕಂ॥** ಕರವಿಡಿದ ತರುಣಿ ತಾನೇ।
ತೆರನಿರ್ದೊಡವಾಕೆ ನರನ ಸುಖಸೌಭಾಗ್ಯಾ ||
ಕರೆಯೆನಿಪ ಲಕ್ಷ್ಮಿಯೆಂದಾ।
ನರಿತಿರ್ಪೆಂ ವರ ಗೃಹಸ್ಥ ಧರ್ಮವಿಂದಬಲೇ ||೨೦||

ಎಲೌ, ಧರ್ಮಾದಿ ಪುರುಷಾರ್ಥಗಳಲ್ಲಿ ತನ್ನನ್ನು ನಂಬಿ ಮದುವೆಯಾದ ಪತ್ನಿಯು, ಕುರೂಪಿಯಾಗಲಿ, ಸುರೂಪಿಯಾಗಲಿ, ಜಾಣೆಯಾಗಲಿ, ಬಡಳಾಗಲಿ, ಜಗಳಗಂಟಿಯಾಗಲಿ, ಅವಳನ್ನೇ ಸೌಂದರ್ಯವತಿಯೂ ಗುಣವತಿಯೂ ಭಾಗ್ಯವತಿಯೂ ಎಂದು ತಿಳಿದು ಸಂತೋಷದಿಂದಿರಬೇಕಾದುದೇ ಗೃಹಸ್ಥನ ಧರ್ಮವು. ಆದುದರಿಂದ ಆಕೆಯ ವಿಷಯದಲ್ಲಿ ನನ್ನ ದೃಷ್ಟಿಗೆ ಸುಗುಣಗಳೇ ಕಾಣುತ್ತಿರುವವು.

**ರಂಭೆ**—ಹಾಗಾದರೆ ಅದೇ ದೃಷ್ಟಿಯನ್ನೇ ಸ್ವಲ್ಪ ನನ್ನ ಕಡೆಗೆ ತಿರುಗಿಸಿ ನೋಡಿ; ಆ ಕುರೂಪಿಯೂ ಗಯ್ಯಾಳಿಯೂ ನಿಮ್ಮ ಕಣ್ಣಿಗೆ ಅಷ್ಟು ಚೆನ್ನಾಗಿ ಕಾಣುವಾಗ, ಪರಮ ಸೌಂದರ್ಯ ಯೌವನ ವಿಲಾಸಗಳಿಂದ ಕೂಡಿದ ನಾನು ಹೇಗೆ ಕಾಣುವೆನೋ, ಅನಂತರ ನಿಮ್ಮ ಕಣ್ಣಿಗೆ ಅವಳು ಯಾವ ರೀತಿ ಕಾಣುವಳೋ ತಿಳಿಯುವದು.

**ತುಕಾರಾಮ**—ಓಹೋ! ಹಾಗೆಯೋ? ಹಾಗಾದರೆ, ಶರೀರ ಸೌಂದರ್ಯವೊಂದೇ ಮುಖ್ಯವಾಗುವ ಪಕ್ಷದಲ್ಲಿ, ಪಾಂಡುರಂಗನು ನನಗೆ ಪುನರ್ಜನ್ಮವನ್ನು ಕೊಡುವುದಾದರೆ, ತಾಯಿ, ನಾನು ಸುಂದರಿಯಾದ ನಿನ್ನ ಉದರದಲ್ಲಿ ಜನಿಸಿ ನನ್ನ ಜನ್ಮವನ್ನು ಸಾರ್ಥಕಮಾಡಿಕೊಳ್ಳುವೆನು. ಈಗ ಮಾತ್ರ ನೀನು ಇಲ್ಲಿ ನಿಲ್ಲದೆ ದಯವಿಟ್ಟು ಹೊರಟುಹೋಗಬೇಕು. ನಾನು ಹರಿದಾಸನು; ಇಂತಹ ನಿನ್ನ ಉಪದೇಶಗಳಿಗೆ ಸಿಕ್ಕತಕ್ಕವನಲ್ಲ. ನನ್ನಲ್ಲಿ ಮತ್ತೆ ಇಂತಹ ದುರ್ವಾಕ್ಯಗಳನ್ನಾಡಬೇಡ. ಈ ಮಹಾ ಪಾಪದಿಂದ ನೀನು ಎಂತಹ ಅಧೋಗತಿಗೆ ಬೀಳುವೆಯೆಂಬುದನ್ನು ನೀನು ಅರಿತಿಲ್ಲ. ತುಕಾ

ರಾಮನು ಪರಸ್ತ್ರೀಯರನ್ನು ರುಕ್ಮಿಣೀಮಾತೆಗೆ ಸಮಾನರೆಂದು ತಿಳಿದಿರುವನು. ಆದುದರಿಂದ ಇನ್ನು ಇಲ್ಲಿ ನಿಲ್ಲದೆ ಹೊರಟು ಹೋಗಮ್ಮಾ.

ರಂಭೆ—(ಪಶ್ಚಾತ್ತಾಪ ವ್ಯಸನಗಳಿಂದ ಆತ್ಮಗತ) ಅಯ್ಯೋ! ಈತನೆಂತಹ ಮಹಾತ್ಮನು! ಜಿತೇಂದ್ರಿಯನು! ಧರ್ಮಶೀಲನು! ದೈವಭಕ್ತನು!! ತಾನಾಗಿ ಬಂದು ಪ್ರಾರ್ಥಿಸಿದ ಸುಂದರಿಯನ್ನು ಕಣ್ಣೆತ್ತಿ ಸಹ ನೋಡದೆ ಮಾತೃ ಸಮಾನಳೆಂದು ಭಾವಿಸಿದ ಈತನ ಚಿತ್ತವು ಎಷ್ಟು ಸ್ಥಿರವಾದುದು! ಅಯ್ಯೋ, ಇಂತಹ ಮಹಾ ಪುರುಷನನ್ನು ಮೋಸ ಗೊಳಿಸಿ ನನ್ನ ಮಾರ್ಗಕ್ಕೆಳೆಯಲು ಪ್ರಯತ್ನಿಸಿದ ನಾನೆಂತಹ ನಿಂದ್ಯಳು! ನೀಚಳು!! ಅಧಮಾಧಮಳು!!! ಅಯ್ಯೋ, ಇಂತಹ ನೀಚ ಕೃತ್ಯಗಳಲ್ಲಿಯೇ ಈವರೆಗೂ ಮುಳುಗಿ ನನ್ನ ಜನ್ಮವನ್ನೇ ವ್ಯರ್ಥಮಾಡಿ ಕೊಂಡ ನಾನೆಂತ ಪತಿತಳು!! ಈ ಮಹಾ ಪುರುಷನ ಸನ್ನಿಧಿಯ ಮಹಿಮೆಯಿಂದ ನನ್ನ ಪಾಪಗಳೆಲ್ಲವೂ ನನಗೆ ಈಗ ಗೋಚರವಾದವು. ಇನ್ನು ನನ್ನ ಗತಿಯೇನು! ನನಗೊದಗುವ ಮಹಾ ನರಕ ಶಿಕ್ಷೆ ಗಳಿಂದ ನನ್ನನ್ನು ಉದ್ಧರಿಸುವರು ಯಾರು? (ದುಃಖಿಸುತ್ತ ಚಿಂತಿಸಿ) ಪರಿಶುದ್ಧಾತ್ಮನಾದ ಈ ಮಹಾತ್ಮನ ಅನುಗ್ರಹವಲ್ಲದೆ ನನಗೆ ಬೇರೆ ಗತಿಯೇ ಇಲ್ಲವು. (ತುಕಾರಾಮನಿಗೆ ನಮಸ್ಕರಿಸಿ) ಮಹಾನುಭಾವಾ! ಮಹಾತ್ಮರಾದ ತಮ್ಮಲ್ಲಿ ಮಹಾಪರಾಧವನ್ನು ಮಾಡಿದ ನಾನು ಪರಮ ಪಾತಕಿಯು, ಅಯೋಗ್ಯಳು, ಅಧಮಳು! ನನ್ನ ಪಾಪ ಗಳೆಲ್ಲವೂ ನನಗೆ ಗೋಚರವಾದವು. ರೂಪ ಯೌವನಗಳಿಂದ ಮದಿಸಿ ನಾನು ದುರ್ಬುದ್ಧಿಯಿಂದ ತಮ್ಮನ್ನು ಪೀಡಿಸಿ ಕಾಡಿದರೂ ತಾವು ಕೋಪಿಸದೆ ನನಗೆ ಸದ್ಬೋಧನೆ ಮಾಡಿದಿರಿ; ನಾನು ತಮಗೆ ಕೃತಜ್ಞ ಳಾಗಿ ಶರಣಾಗತಳಾಗಿರುವೆನು. ನನ್ನ ಸರ್ವಾಪರಾಧಗಳನ್ನೂ ಮನ್ನಿಸಿ ತಮ್ಮ ಸದುಪದೇಶದಿಂದ ನನಗೆ ಪ್ರಪಂಚ ದುಃಖಗಳು ದೂರವಾಗುವಂತೆ ಅನುಗ್ರಹಿಸಿ ನನ್ನನ್ನು ಕಾಪಾಡಬೇಕು. (ಪಾದ ಗಳ ಮೇಲೆ ಬೀಳುವಳು.)

**ತುಕಾರಾಮ**—ತಾಯಿಾ, ಏಳು, ಏಳು. ನಿನ್ನ ಈ ಪಶ್ಚಾತ್ತಾಪದಿಂದ ನನಗೆ ಸಂತೋಷವಾಯಿತು. ನಿನಗೆ ನರಕದ ಭೀತಿಯೂ ಕಡಿಮೆ ಯಾಯಿತು. ಪೂರ್ವಜನ್ಮದಲ್ಲಿ ಮಾಡಿದ ಪಾಪಶೇಷದಿಂದ ನೀನು ಈ ಜನ್ಮದಲ್ಲಿ ವೇಶ್ಯೆಯಾಗಿ ಜನಿಸಿದೆ. ಇನ್ನು ಈ ಜನ್ಮದಲ್ಲಿ ಪಾಪ ಗಳನ್ನು ಕಳೆದುಕೊಳ್ಳಲು ಪ್ರಯತ್ನಿಸದೆ ಮತ್ತೆ ಪಾಪಗಳನ್ನೇ ಸಂಗ್ರಹಿ ಸುತ್ತ ಬಂದರೆ ಇನ್ನೂ ನೀಚ ಜನ್ಮಗಳನ್ನೆತ್ತಿ ಅವುಗಳ ಫಲವನ್ನನು ಭವಿಸಬೇಕಾಗುವುದು. ಅಯ್ಯೋ !

**ಭಾ॥** ಪರಮ ಭಕ್ತಿಯೊಳೀಶ ಸೇವೆಯ।
ವಿರಚಿಸಲು ಪಡೆದಿಂದ್ರಿಯಂಗಳ।
ದುರುಪಯೋಗಕೆ ನಿಲಿಸಿ ನಟನೆಯೊಳಾರ್ಜಿಸುತೆ ಧನವ ||
ನರರ ವಂಚಿಸಿ ಮುಂದೆ ವಿಧವಿಧ।
ನರಕ ಭಾಜನರಪ್ಪ ವೇಶ್ಯಾ।
ತರುಣಿಯರು ತಾವೇಕೆ ಚಿತ್ತದೊಳಂಧರಾಗಿಹರೋ ||೨೧||

ಈಗಲಾದರೂ ಕಣ್ಣುಗಳನ್ನು ತೆರೆ. ಎಚ್ಚರಿಕೆಯನ್ನು ತಂದುಕೋ. ಯೌವನವಿರುವವರೆಗೂ ಸೌಂದರ್ಯವೂ ಶಕ್ತಿಯೂ ಇರುವವು. ಅಸ್ಥಿರವಾದ ಯೌವನವು ಕಳೆದುಹೋದಮೇಲೆ ನಿನ್ನನ್ನು ಕೇಳುವರು ಯಾರು? ಆಗ ನಿನ್ನ ಇಂದ್ರಿಯಗಳೇ ನಿನ್ನಧೀನ ತಪ್ಪುವವು. ಸೊಂಟವು ಸೊಟ್ಟನಾಗುವುದು, ಮುಖವು ಸುಕ್ಕುಗಟ್ಟುವುದು, ತುಟಿಗಳು ಜೋಲು ಬೀಳುವವು, ದೃಷ್ಟಿಯು ಮಂಕಾಗುವುದು, ಕೈಕಾಲುಗಳು ಕೃಶವಾಗಿ ದುರ್ಬಲವಾಗುವುವು. ಕುತ್ತಿಗೆಯು ಅಭಿಮಾನವನ್ನು ಬಿಟ್ಟು 'ಈ ಪ್ರಾಣವು ಬೇಡ ; ಈ ಪ್ರಾಣವು ಬೇಡ' ಎಂದು ಹೇಳು ವಂತೆ ನಡುಗುವುದು. ಕಂಡ ಕಂಡವರನ್ನು ನಟನೆಯಿಂದ ಬೆರಗು ಮಾಡಿ ವಂಚಿಸಿ ಮೆರೆದು ಸಂಪಾದಿಸಿದ ಸಂಪತ್ತಿನಿಂದ, ಮುಂದೆ ಜೀರ್ಣವಾಗಿ ಸುಕ್ಕಿಡಿದ ಶರೀರಕ್ಕೆ ಯಾವ ಕಾರುಣ್ಯವನ್ನೂ ತೇಜ ಸ್ಸನ್ನೂ ಸೌಂದರ್ಯವನ್ನೂ ಉಂಟುಮಾಡಿಕೊಳ್ಳುವುದಕ್ಕೂ ಸಾಧ್ಯ ವಾಗಲಾರದು. ಆಗ ಲೋಕದಲ್ಲಿ ನಿನ್ನನ್ನು ನೋಡಿದವರೆಲ್ಲಗೂ

ನಕ್ಕು ಪರಿಹಾಸ್ಯಮಾಡುವರು. ಕುಚೇಷ್ಟೆಮಾಡುವರು. ಅವಹೇಳನದ ಮಾತುಗಳನ್ನಾಡುವರು. ಆಬಾಲವೃದ್ಧರೂ ನಿನ್ನ ಮುಖದ ಮೇಲೆ ಉಗುಳುವರು. ಯೌವನ ಸೌಂದರ್ಯಗಳಿರುವವರೆಗೂ ಪುರುಷರು, ಒಳ್ಳೆಯ ನಾಯಿಯನ್ನು ಲಾಲಿಸುವಂತೆ ನಿನ್ನನ್ನು ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಪ್ರೀತಿಸುವರು. ನಿನ್ನ ಸೌಂದರ್ಯವು ಹೋದ ನಂತರ ಕಜ್ಜಿ ಹತ್ತಿದ ನಾಯಿಯನ್ನು ಕೋಲಿನಿಂದ ಹೊಡೆದೋಡಿಸು ವಂತೆ ನಿನ್ನನ್ನು ದೂರಮಾಡಿಬಿಡುವರು. ಅಲ್ಲದೆ ರೋಗ ಬಂದು ನರಳುವಾಗ ನಿನಗೆ ಈ ಲೋಕದಲ್ಲಿಯೇ, ಈ ಜನ್ಮದಲ್ಲಿಯೇ, ನರಕ ಯಾತನೆಯು ಅನುಭವಕ್ಕೆ ಬರುವುದು. ಕಡೆಗೆ ಯಾವಾಗಲೋ ಯಮನು ಬಂದು ನಿನ್ನನ್ನು ಹಿಡಿದುಕೊಳ್ಳುವನು. ಆಗ ಯಾರೂ ನಿನ್ನನ್ನು ಬಿಡಿಸಲಾರರು. ಆಪತ್ಕಾಲದಲ್ಲಿ ಕೈಹಿಡಿದು ಪಾಲಿಸತಕ್ಕ ವನು ನಮ್ಮ ವಿಠಲನೊಬ್ಬನಲ್ಲದೆ ಮತ್ತೆ ಯಾರೂ ಇಲ್ಲ.

**ರಂಭೆ**—(೨೪) ಆಹಾ! ಗುರು ಮಹಾರಾಜಾ, ನನ್ನ ನೀಚಕರ್ಮದ ಫಲ ಪರ್ಯವಸಾನವನ್ನು ಇಂತಹ ಅದ್ಭುತ ಭಯಂಕರ ಚಿತ್ರರೂಪದಿಂದ ನನಗೆ ಈವರೆಗೂ ಯಾರೂ ತೋರಿಸಿರಲಿಲ್ಲ. ಅಯ್ಯೋ! ಈ ನನ್ನ ನೀಚ ಕಾರ್ಯಗಳಿಗೆ ಕಡೆಗೆ ಮಹಾ ರೌರವಾದಿ ನರಕವಾಸವಲ್ಲದೆ ನನಗೆ ಬೇರೆ ಗತಿಯಿಲ್ಲವಾಯಿತೇ! ಅಯ್ಯೋ! ವಿಧಿಯೇ, (ದುಃಖಿಸಿ) ಗುರು ಮಹಾರಾಜಾ, ನನ್ನನ್ನು ನರಕದಿಂದ ಉದ್ಧರಿಸತಕ್ಕ ಮಾರ್ಗ ವನ್ನು ತಾವೇ ತೋರಿಸಿ ಕಾಪಾಡಬೇಕು. ಇಂದು ಮೊದಲಾಗಿ ನಾನು ತಮಗೆ ದಾಸಿಯಾಗಿರುವೆನು. ನನ್ನಿಂದ ತಾವು ಸೇವೆಯನ್ನು ಕೈಕೊಂಡು ಉದ್ಧರಿಸಬೇಕು.

**ತುಕಾರಾಮ**—ಬೇಡ, ಬೇಡ. ನನಗೆ ಈ ಜಡದೇಹದ ಮೇಲೆ ಅಭಿಮಾನ ವಿಲ್ಲ. ಈ ರಕ್ತ ಮಾಂಸಾಸ್ಥಿಗಳ ಬೊಂಬೆಗೆ ನೀನೇತಕ್ಕೆ ಸೇವೆ ಮಾಡ ಬೇಕು? ನಿನ್ನ ಶ್ರಮವನ್ನೇತಕ್ಕೆ ವ್ಯರ್ಥಮಾಡಿಕೊಳ್ಳಬೇಕು? ನಮ್ಮ ಪಾಂಡುರಂಗನ ಸುಂದರ ಮುಖ ಕಮಲದ ಮೇಲೆ ಕ್ಷಣಮಾತ್ರ ಭಕ್ತಿ ಯಿಂದ ದೃಷ್ಟಿಯಿಟ್ಟು ಧ್ಯಾನಿಸಿ, ಆ ಪರಮಾತ್ಮನ ಸೇವೆಗಾಗಿ ನೀನು

ಈ ನಿನ್ನ ದೇಹವನ್ನು ಸಮರ್ಪಿಸಿದರೆ ಆತನು ನಿನ್ನನ್ನು ಸಕಲ ಪಾಪಗಳಿಂದಲೂ ಉದ್ಧರಿಸುವನು. ಕಡೆಗೆ ನಿನ್ನನ್ನು ಆತನಲ್ಲಿಯೇ ಐಕ್ಯ ಮಾಡಿಕೊಳ್ಳುವನು. ಆದಕಾರಣ ನಿಶ್ಚಲ ಭಕ್ತಿ ಭಾವದಿಂದ ಆತನನ್ನು ಭಜಿಸಿ ಸೇವಿಸು.

**ರಂಭೆ**—ಗುರು ಮಹಾರಾಜಾ, ಅಜ್ಞಾನಾಂಧಕಾರದಲ್ಲಿದ್ದ ನನಗೆ ಜ್ಞಾನ ಜ್ಯೋತಿಯನ್ನು ಕೊಟ್ಟು ಜನ್ಮೋದ್ಧಾರ ಮಾರ್ಗವನ್ನು ತೋರಿಸಿದ ತಮ್ಮ ಉಪಕಾರದ ಋಣವನ್ನು ನಾನು ಹೇಗೆ ತೀರಿಸಲಿ?

**ತುಕಾರಾಮ**—ನನ್ನ ಉಪಕಾರವೇನು? ಕರ್ತನೂ ಪ್ರೇರಕನೂ ಸಕಲವೂ ಆ ಪಾಂಡುರಂಗನು. ಆತನು ನಿನಗೆ ಮಂಗಳವನ್ನುಂಟು ಮಾಡುವನು. ಇನ್ನು ನಮ್ಮ ಪಾಂಡುರಂಗನ ಭಜನೆ ಮಾಡು.

**ಭಾ॥** ಹರಿಯೆ ನಿನ್ನಯ ಚರಣ ಸೇವಾ।
ಚರಣ ಜನ್ಮೋದ್ಧರಣ ಜನರಿಗೆ।
ದುರಿತಗಣ ಸಂಹರಣ ಸಂಸಾರಾಬ್ಧಿ ಸಂತರಣ ||
ನಿರುತ ಸುಖ ವಿಸ್ತರಣ ಮಂಗಳ।
ಕರ ಮನೋಜ್ಞಾಭರಣವಾತ್ಮಕೆ।
ಪರಮ ಕರುಣಾವರಣ ಪಾಲಿಸು ಕಮಲಜಾ ರಮಣ ॥೨೨॥

**(ಇಬ್ಬರೂ ಭಜನೆ ಮಾಡುವರು.)**

## ಸ್ಥಾನ ೪—ದೇವಪುರದ ಬೀದಿ

**(ಮಂಬಾಜಿ ಭಿಕ್ಷಾಟನೆಗಾಗಿ ಪದ್ಧತಿಯಂತೆ ಬರುವನು.) (೨೫)**

**ಮಂಬಾಜಿ**—(**ಆತ್ಮಗತ**) ಆ ತುಕ್ಕನನ್ನು ಭಂಗಪಡಿಸಲು ಹೋದ ರಂಭೆಯು ಇನ್ನೂ ಬರಲಿಲ್ಲ. ಅವಳು ಕಾರ್ಯವನ್ನು ಸಾಧಿಸಿರಬಹುದೇ! (**ಆಲೋಚಿಸಿ**) ಸಂದೇಹವೇನು? ಅವಳ ರೂಪ ಯೌವನಗಳಿಗೂ ಚಾತುರ್ಯಕ್ಕೂ ಯಾರು ತಾನೇ ಸೋಲದಿರುವರು! ಲಾವಣ್ಯದಲ್ಲಿ ದೇವಲೋಕದ ರಂಭೆಯನ್ನೂ ಸಹ ಮೀರಿಸಿರುವ ಆ

ರಂಭೆಯು ಹಾವ ಭಾವ ವಿಲಾಸ ವಿಭ್ರಮಗಳೂ ಗಾನ ನರ್ತನಗಳ ಸೊಬಗೂ ಸಹ ಎಂತಹ ಯೋಗಿಯ ಚಿತ್ತವನ್ನಾದರೂ ಪಲ್ಲಟಮಾಡದೆ ಇರದು. ಹೀಗಿರುವಲ್ಲಿ ಆ ಬಡ ತುಕ್ಕನು ಇಂತಹ ಮೋಹಿನಿಯ ಮೋಹಪಾಶಕ್ಕೆ ಬೀಳದಿರುವನೇ! ಬಿದ್ದೇ ಇರಬೇಕು. ಆದರೆ ಎರಡು ಮೂರು ದಿನಗಳಾದರೂ ಅವಳು ಹಿಂದಿರುಗಿ ನನ್ನ ಬಳಿಗೆ ಬರಲೇ ಇಲ್ಲವಲ್ಲಾ! ಕಾರಣವೇನು! ಒಂದು ವೇಳೆ ಅವಳ ಮನಸ್ಸು ಅವ ನಲ್ಲಿಯೇ ಲೀನವಾಗಿ ಅಲ್ಲಿಯೇ ನಿಂತುಬಿಟ್ಟಿರಬಹುದೆಂದರೆ ಅವಳಿಗೆ ನನ್ನಲ್ಲಿರುವ ಪ್ರೇಮವು ಮತ್ತೆ ಯಾರಲ್ಲಿಯೂ ಇಲ್ಲ. ಅಲ್ಲದೆ ಅವಳ ಮನಸ್ಸು ಸೋಲಲು ತಕ್ಕಂತೆ ಆ ತುಕ್ಕನಲ್ಲಿ ರೂಪ ಯೌವನ ಧನ ಗಳಿವೆಯೇ ಎಂದರೆ ಅವು ಮೊದಲೇ ಇಲ್ಲ. ಆದುದರಿಂದ ಅವಳು ಅವನ ಪಾಶಕ್ಕೆ ಬಿದ್ದಿರಲಾರಳು! ಒಂದು ವೇಳೆ ಹಾಗೆ ಬಿದ್ದಿದ್ದರೂ ನನ್ನ ಕಾರ್ಯವಾಯಿತೆಂದೇ ನಿರ್ಧರವಾಯಿತು. ಹೇಗಾದರೂ ಇವಳ ವಿಳಂಬದಿಂದ ನನ್ನ ಮನಸ್ಸಿಗೆ ಆಶ್ಚರ್ಯವೂ ಕುತೂಹಲವೂ ಅತಿಶಯ ವಾಗಿರುವುದು. ಇನ್ನು ಯಾವಾಗ ಆ ನನ್ನ ಮನೋಹರೆಯ ಮುಖ ದಿಂದ ಆ ತುಕ್ಕನ ಮಾನಭಂಗದ ಶುಭ ವಾರ್ತೆಯನ್ನು ಕೇಳಿ ಆನಂದ ಪಡುವೆನೋ ಕಾಣೆನೇ!

**ರಂಭೆ**—(**ತುಕಾರಾಮನನ್ನು ಹೊಗಳುತ್ತ ಯೋಗಿನಿಯಂತೆ ಪ್ರವೇಶಿಸುವಳು.**) ೨೭

**ಕಂ**॥ ಜಯ ಭವ್ಯ ಗುಣಾ ರಾಮಾ।
ಜಯ ಮಹಿಮೋದ್ದಾಮ ಜಯ ದಯಾರಸ ಧಾಮಾ ॥
ಜಯ ಸಾಧು ತುಕಾರಾಮಾ।
ಜಯ ನಿರ್ಜಿತ ಕಾಮ ಪರಮ ಯೋಗಿ ಲಲಾಮಾ ॥೨೩॥

**ಮಂಬಾಜಿ**—(**ನೋಡಿ ಆಶ್ಚರ್ಯದಿಂದ**) ಏನಿದು! ಆಶ್ಚರ್ಯವು! ಇವಳು ನಮ್ಮ ರಂಭೆಯಲ್ಲವೇ! ಅಹುದು! ಅವಳೇ! ದಿವ್ಯಾಲಂಕಾರಭೂಷಿತ ಳಾಗಿ ಭುವನ ಮೋಹಿನಿಯಂತೆ ಇದ್ದ ಇವಳು ಹೀಗೆ ಯೋಗಿನಿಯಂತೆ ಆಗಿರುವಳು. (**ತುಕಾರಾಮನ ಸ್ತುತಿಯನ್ನು ಕೇಳಿ**) ಅದೋ! ಆ ತುಕ್ಕ

ನನ್ನು ಬೇರೆ ಹೊಗಳುತ್ತಿರುವಳು! ಚೆನ್ನಾಯಿತು! ಬಹಳ ಚೆ ಯಿತು!! (ರಂಭೆಯ ಬಳಿಗೆ ಬಂದು ಕೋಪದಿಂದ) ಎಲೆ ರಂ ಏನಿದು?

**ರಂಭೆ**—(ವಿನಯದಿಂದ) ಏತಕ್ಕೆ ಸ್ವಾಮಿಾ, ಇಷ್ಟು ಆಗ್ರಹ ಮಾಡು

**ಮಂಬಾಜಿ**—ಎಲೌ, ನೀನು ಹೋದ ಕಾರ್ಯವೇನು? ನೀನು ಬಂದಿ ರೀತಿಯೇನು? ಈ ವೇಷವೇನು?

**ರಂಭೆ**—ಸ್ವಾಮಿಾ, ನಾನು ಹೋದ ಕಾರ್ಯವು ನಿಮಗೆ ತಿಳಿದೇ ಇ ದಷ್ಟೆ! ಅದನ್ನು ಮತ್ತೆ ಕೇಳಲೇಕೆ?

**ಮಂಬಾಜಿ**—ಹಾಗಾದರೆ ನಿನ್ನ ಕಾರ್ಯವನ್ನು ಗೆದ್ದು ಬಂದೆಯೋ?

**ರಂಭೆ**—ಓಹೋ! ನಾನು ಗೆದ್ದೆನು. ಧನ್ಯಳಾದೆನು! ಗುರು ಕ ಪಾತ್ರಳಾದೆನು.

**ಮಂಬಾಜಿ**—(ಸಂತೋಷದಿಂದ) ಓಹೋ, ಬಹಳ ಸಂತೋಷ! ಸಂತೋಷ!! ಹಾಗಾದರೆ ನೀನು ಆ ತುಕಾರಾಮನನ್ನು ಹೊ ತ್ತಿರುವೆಯಲ್ಲಾ! ಕಾರಣವೇನು?

**ರಂಭೆ**—ಏತಕ್ಕೆಂದರೆ ನಾನು ಆ ಮಹಾತ್ಮನ ಕೃಪೆಯಿಂದ ಧ ದುದರಿಂದ.

**ಮಂಬಾಜಿ**—ಓಹೋ! ಅವನು ನಿನ್ನ ಇಷ್ಟದಂತೆ ನಿನ್ನ ದಾರಿಗೆ ಬ ನಿನ್ನನ್ನು ಧನ್ಯಳನ್ನಾಗಿ ಮಾಡಿದುದರಿಂದಲೋ? ಬಹಳ ಸಂತೊ

**ರಂಭೆ**—(ಆತ್ಮಗತ) ಈ ಹುಚ್ಚನಿಗೆ ನಿಜಾಂಶವಿನ್ನೂ ಅರ್ಥವಾಗಲಿ

**ಮಂಬಾಜಿ**—ಆದರೆ ನೀನೀರೀತಿ ಯೋಗಿನಿಯಂತೆ ಇರುವುದೇತರಿಂ

**ರಂಭೆ**— ಆ ಮಹಾತ್ಮರನುಗ್ರಹದಿಂದ.

**ಮಂಬಾಜಿ**—ಹಾಗೆಂದರೇನು! ಆ ತುಕ್ಕನು ತನ್ನಂತೆಯೇ ನಿನ್ನ ಬೈರಾಗಿಯಾಗುವಂತೆ ಹೇಳಿದನೇನು?

**ರಂಭೆ**—ಅವರು ಹೇಳದಿದ್ದರೂ ನಾನೇ ಈ ರೀತಿಯಾದೆನು.

**ಮಂಬಾಜಿ**—ಕಾರಣ?

**ರಂಭೆ**—ತಮ್ಮ ಉಪದೇಶವೇ ಕಾರಣ.

**ಮಂಬಾಜಿ**—ಅಂದರೆ ನಾನು ನಿನಗೆ ಹೀಗಾಗೆಂದು ಹೇಳಿದೆನೇ?

**ರಂಭೆ**—ತಮ್ಮ ಪ್ರೇರಣೆಯಿಂದಲ್ಲದೆ ಇದ್ದಲ್ಲಿ ನಾನು ಆ ಲೋಕಪೂಜ್ಯರಾದ ತುಕಾರಾಮ ಗುರುವರ್ಯರ ಸನ್ನಿಧಿಗೆ ಹೋಗುತ್ತಿದ್ದೆನೇ? ನನಗೆ ಅವರ ಸದುಪದೇಶವೂ ಕೃಪಾಪೂರ್ವಕವಾದ ಆಶೀರ್ವಾದವೂ ಲಭಿಸುತ್ತಿತ್ತೇ? ನಾನು ನನ್ನ ದುರ್ಮಾರ್ಗವನ್ನು ಬಿಟ್ಟು ಈ ರೀತಿ ಸಾಧುವೃತ್ತಿಯನ್ನವಲಂಬಿಸುತ್ತಿದ್ದೆನೇ? ಆದುದರಿಂದ ನನ್ನ ಜನ್ಮೋದ್ಧಾರಕ್ಕೆ ತಾವೇ ಮೂಲಕಾರಣರು. ತಮಗೆ ನಮಸ್ಕರಿಸುವೆನು.

(ವಂದಿಸಿ ಹೋಗುತ್ತಿರುವಳು.)

**ಮಂಬಾಜಿ**—(ಅಡ್ಡಗಟ್ಟಿ) ಎಲೌ! ಏನು? ನೀನು ಆ ತುಕ್ಕನ ಕಪಟ ಬೋಧನೆಗೆ ಭ್ರಾಂತಳಾಗಿ ಸಾಧುವಾಗಲು ಯತ್ನಿಸಿದೆಯಾ? ಹೆದರಿಸಲು ಹೋಗಿ ಹೆದರಿ ಬಂದಂತೆ ಅವನನ್ನು ವಂಚಿಸಲು ಹೋಗಿ ನೀನೇ ಅವನಿಂದ ವಂಚಿತಳಾದೆಯಾ? ಛೀ! ಛೀ! ನೀನು ಇಂತಹ ಅವಿವೇಕಿನಿಯೆಂದು ನಾನು ತಿಳಿದಿರಲಿಲ್ಲ.

**ರಂಭೆ**—ಈಗ ತಿಳಿಯಿತಲ್ಲವೇ! ಇನ್ನು ನನ್ನ ಗೊಡವೆಯು ತಮಗೆ ಬೇಡಿ. ಮುಂದಕ್ಕೆ ದಯಮಾಡಿ.

**ಮಂಬಾಜಿ**—ಎಲೌ ಗುರುವಾದ ನನ್ನನ್ನು ನೀನು ಈ ರೀತಿ ಉದಾಸೀನ ಮಾಡಬಹುದೇ?

**ರಂಭೆ**—ಸ್ವಾಮಿ! ತಾವು ನನ್ನ ಗುರುವಲ್ಲ! ಸುಮ್ಮನೆ ದಯಮಾಡಿ.

**ಮಂಬಾಜಿ**—ಏನು? ನಾನು ನಿನ್ನ ಗುರುವಲ್ಲವೇ?

**ರಂಭೆ**—ಅಲ್ಲ. ಅಲ್ಲವೇ ಅಲ್ಲ. ನನ್ನ ಗುರುವು ಪೂಜ್ಯರಾದ ತುಕಾರಾಮ ಗುರು ಮಹಾರಾಜರು.

**ಮಂಬಾಜಿ**—ಎಲೆ ಹುಚ್ಚು ರಂಡೇ! ಏತಕ್ಕೆ ಇಂತಹ ಅವಿವೇಕದ ಮಾತುಗಳನ್ನಾಡುವೆ? ಈ ಶ್ರೀ ಮಂಬಾಜೀ ಸಾಧು ಮಹಾರಾಜನ ಕೀರ್ತಿಯೂ ವೈರಾಗ್ಯವೂ ಸಾಧುತ್ವವೂ ಸಹ ಪ್ರಪಂಚಕ್ಕೇ ವಿದಿತವಾಗಿರುವುದರಿಂದಲೇ ಎಲ್ಲರೂ ನನ್ನನ್ನು ಗೌರವಿಸಿ ಹೊಗಳುತ್ತಿರುವರು. ಹೀಗಿರುವಲ್ಲಿ ನಮ್ಮ ಶಿಷ್ಯಳಾದ ನೀನು ನನ್ನನ್ನು ಗುರುವಲ್ಲವೆನ್ನಬಹುದೇ?

**ರಂಭೆ**—ಸ್ವಾಮಿಾ, ತಮ್ಮ ವೈರಾಗ್ಯವೂ ಸಾಧುತ್ವವೂ ಲೋಕದ ಇತರ ಜನರಿಗಿಂತಲೂ ನನಗೆ ಇನ್ನೂ ಚೆನ್ನಾಗಿ ತಿಳಿದಿರುವುದು. ಆದುದರಿಂದಲೇ ಅವರಂತೆ ನಾನು ನಿಮ್ಮನ್ನು ಹೊಗಳುವುದಿಲ್ಲ. ತಾವು ನನ್ನ ಗುರುಗಳಲ್ಲ. ನಾನು ತಮ್ಮ ಶಿಷ್ಯಳಲ್ಲ; ಕ್ಷಮಿಸಿ. (**ಹೊರಡುವಳು.**)

**ಮಂಬಾಜಿ**—(**ತಡೆದು**) ಎಲೌ! ನಿಲ್ಲು, ಎಲ್ಲಿ ಹೋಗುವೆ? ಈ ಲೋಕಪೂಜ್ಯ ಮಹನೀಯನಾದ ಮಂಬಾಜೀ ಸಾಧು ಮಹಾರಾಜನು ತನ್ನ ಸರ್ವಸ್ವವನ್ನೂ ನಿನಗರ್ಪಿಸಿ ನಿನ್ನನ್ನು ತನ್ನ ಪ್ರಾಣವಾಗಿಯೂ ಅರ್ಧ ಶರೀರವಾಗಿಯೂ ಕಂಡುಕೊಂಡು ಸದಾ ನಿನ್ನ ಹಿತವನ್ನೇ ಬಯಸುತ್ತಿರುವಲ್ಲಿ, ನೀನು ಆ ತುಚ್ಛ, ನೀಚ, ಅಲ್ಪ, ಅಯೋಗ್ಯನಾದ ಆ ತುಕ್ಕನನ್ನು ಗುರುವೆಂದು ಹೇಳಿ ನನ್ನನ್ನು ನಿರಾಕರಿಸುತ್ತಿರುವೆಯಲ್ಲಾ? ಇದು ನಿನಗೆ ನ್ಯಾಯುವೇ?

**ರಂಭೆ**—ಸ್ವಾಮಿಾ! ತಾವು ತಮ್ಮನ್ನು ಎಷ್ಟು ಬೇಕಾದರೂ ಹೊಗಳಿಕೊಳ್ಳಿ; ಆದರೆ ಆ ಲೋಕಪೂಜ್ಯರಾದ ಮಹನೀಯ ತುಕಾರಾಮ ಗುರು ಮಹಾರಾಜರನ್ನು ಮಾತ್ರ ನನ್ನೆದುರಲ್ಲಿ ದೂರಬೇಡಿ. ತಾವು ನನಗೆ ಉಪಕಾರಮಾಡಿರುವುದಾದರೆ ಅದಕ್ಕೆ ನಾನು ಕೃತಜ್ಞಳಾಗಿರುವೆನು; ನಮಸ್ಕರಿಸುವೆನು. ಆದರೆ ತಾವು ಅಂತಹ ಮಹಾ ಮಹಿಮರಾದ ಸಾಧು ಮಹನೀಯರಿಗೆ ಅವಮಾನ ಮಾಡಲು ಯತ್ನಿಸಿ ಅವರನ್ನು ದೂಷಿಸುತ್ತಿರುವುದು ಧರ್ಮವಲ್ಲ; ಸಾಕು.

**ಮಂಬಾಜಿ**—ಎಲೌ, ಕಾಸಿನ ಬೆಲೆ ಬಾಳದ ಸೂಳೆಯಾದ ನೀನೋ ನನಗೆ ಧರ್ಮವನ್ನು ಬೋಧಿಸತಕ್ಕವಳು?

**ರಂಭೆ**—ಸ್ವಾಮಿಾ, ಕ್ಷಮಿಸಿ. ತಾವು ಮಾಡುತ್ತಿರುವ ಕಾರ್ಯಗಳನ್ನು ಚೆನ್ನಾಗಿ ಬಲ್ಲ ನಾಸಲ್ಲದೆ ಮತ್ತೆ ಯಾರೂ ತಮಗೆ ಧರ್ಮವನ್ನು ಬೋಧಿಸಲು ಬರಲಾರರು. ಹಾಗೆ ನಾಸು ಬೋಧಿಸಲರ್ಹಳಲ್ಲವೆಂದು ತಮಗೆ ತೋರಿದರೆ ನಮ್ಮ ಗುರುಗಳಾದ ತುಕಾರಾಮ ಸಾಧುಗಳ ಸನ್ನಿಧಿಗೆ ಬನ್ನಿ. ಅವರು ತಮಗೆ ಸಕಲ ನೀತಿ ಧರ್ಮಗಳನ್ನೂ ಬೋಧಿಸಿ ಪರಿಶುದ್ಧರನ್ನಾಗಿ ಮಾಡುವರು.

**ಮಂಬಾಜಿ**—(**ಕೋಪದಿಂದ**) ಛೀ! ಭ್ರಷ್ಟರಂಡೇ! ನನ್ನಂತಹ ಜ್ಞಾನಿಯೂ, ಶಾಸ್ತ್ರ ವಿಶಾರದನು, ಕರ್ಮಠನು, ಸಾಧು ಸತ್ಪುರುಷನು, ಧರ್ಮ ನೀತಿ ಕೋವಿದನು, ಸದಾಚಾರ ಸಂಪನ್ನನು, ಆ ಅಯೋಗ್ಯನೂ ಠಕ್ಕನೂ ಆದ ತುಕ್ಕನಿಂದ ಧರ್ಮಬೋಧನೆಯನ್ನು ಹೊಂದಬೇಕೇ? ಇನ್ನೊಂದಾವೃತ್ತಿ ಇಂತಹ ದುರ್ವಾಕ್ಯಗಳನ್ನಾಡಿದರೆ ನಿನ್ನ ನಾಲಿಗೆ ಯನ್ನು ಸೀಳಿಬಿಟ್ಟೇನು! ಎಚ್ಚರಿಕೆ.

**ರಂಭೆ**—ತಾವು ಮನಸ್ಸು ಬಂದಂತೆ ಮಾತನಾಡಿಕೊಳ್ಳಿ; ಅದಕ್ಕೆ ತಡೆ ಯೇನು? ಆದರೆ ನೀವು ಸದಾಚಾರಸಂಪನ್ನರೂ ಧರ್ಮಜ್ಞರೂ ಸಾಧು ಸತ್ಪುರುಷರೂ ಆಗಿದ್ದಲ್ಲಿ ನಿಮ್ಮ ಸತ್ಕರ್ಮಾನುಷ್ಠಾನವನ್ನು ಬಿಟ್ಟು, ಧರ್ಮಮಾರ್ಗವನ್ನತಿಕ್ರಮಿಸಿ, ಸತ್ಯವಂತರಾದ ಆ ಮಹ ನೀಯ ತುಕಾರಾಮ ಗುರುಗಳ ಹೆಸರಿನ ಮೇಲೆ ಸೆಟಿಕೆಗಳನ್ನು ಮುರಿದು ದೂಷಿಸುತ್ತಿರಲಿಲ್ಲ. ಅವರ ಮಾನಭಂಗಮಾಡಬೇಕೆಂದು ನನಗ ದುರ್ಬೋಧನೆ ಮಾಡುತ್ತಿರಲಿಲ್ಲ. ಸಾಕು ನಿಮ್ಮ ಪ್ರಶಂಸೆಯು.

**ಮಂಬಾಜಿ**—ಎಲೌ, ನಿನಗೆ ಆ ರೀತಿಯಾಗಿ ತುಕ್ಕನನ್ನು ಭಂಗ ಮಾಡಲು ಆಜ್ಞೆಮಾಡಿದವನು ಶ್ರೀಮದಾಂಜನೇಯನು, ನಾನಲ್ಲ.

**ರಂಭೆ**—ಅಯ್ಯೋ! ನೀವು ಮಾಡಿದ ಮಹಾ ಪಾತಕವನ್ನು ನಿರ್ಮಲಾತ್ಮ ನಾದ ಆಂಜನೇಯನ ಮೇಲೆ ಏತಕ್ಕೆ ಆರೋಪಿಸಿ ಮತ್ತಷ್ಟು ದೋಷಿ ಗಳಾಗುವಿರಿ? ಸಾಕು, ನಿಲ್ಲಿಸಿ; ನಾಸು ಹೊರಡುವೆನು. ಇನ್ನು ನೀವು ನನ್ನನ್ನು ಅತಿಯಾಗಿ ಕೆಣಕುವುದಾದರೆ, ಅಥವಾ ತುಕಾರಾಮ ಗುರು ಮಹಾರಾಜರನ್ನು ದೂಷಿಸುವುದಾದರೆ ನೀವು ಈವರೆಗೆ ನಡೆಯಿಸಿರುವ

ದುಷ್ಕಾರ್ಯಗಳನ್ನೂ ನಿಮ್ಮ ದುರಾಚಾರಗಳನ್ನೂ ಎಲ್ಲವನ್ನೂ ಜನರಲ್ಲಿ ಪ್ರಸಿದ್ಧಪಡಿಸಿ ನಿಮ್ಮ ಮಾನವನ್ನು ಕಳೆದು ಬಿಡಬಲ್ಲೆನು. ಅಷ್ಟು ಅನರ್ಥವು ಬೇಡ. ಸುಮ್ಮನೆ ದಯಮಾಡಿ. ನಿಮ್ಮೊಡನೆ ಪ್ರಸಂಗದಲ್ಲಿ ಕಾಲ ಕಳೆಯಲು ನನಗೆ ಅಸಹ್ಯವಾಗುವುದು. (**ಹೋಗುವಳು.**)

**ಮಂಬಾಜಿ**—ರಂಭೇ, ರಂಭೇ! ಇಲ್ಲಿ ಬಾ! ಇಲ್ಲಿ ಬಾ! ಸ್ವಲ್ಪ ನಿಲ್ಲು. (**ನೋಡಿ**) ಹೊರಟೇ ಹೋದಳು. ಆ ತುಕ್ಕನ ಮಾನಭಂಗಮಾಡಲು ಪ್ರಯತ್ನಿಸಿ, ನಾನು ಇವಳನ್ನೂ ಕಳೆದುಕೊಂಡು ಇವಳಿಂದ ಮಾನವನ್ನೂ ಕಳೆದುಕೊಳ್ಳುವ ರೀತಿಯಾಯಿತಲ್ಲಾ! ಆ ತುಕ್ಕನು ಇವಳಿಗೆ ಇಷ್ಟು ಸ್ವಲ್ಪ ಕಾಲದಲ್ಲಿ ಇನ್ನೆಂತಹ ಉಪದೇಶವನ್ನು ತುಂಬಿರಬಹುದು! ಸುಮ್ಮನಿರಲಾರದೆ ನನ್ನ ಸುಖಕ್ಕೆ ನಾನೇ ಭಂಗವನ್ನು ತಂದುಕೊಂಡಂತಾಯಿತಲ್ಲಾ! ಇನ್ನು ಇವಳು ನನ್ನ ಮಾರ್ಗಕ್ಕೆ ಬರುವಂತೆ ಇಲ್ಲ. ಮತ್ತೆ ಬಲಾತ್ಕರಿಸಿದರೆ ನನ್ನ ಮರ್ಯಾದೆಯೇ ಉಳಿಯುವಂತಿಲ್ಲ. ಈಗ ಏನು ಮಾಡಲಿ? ಈ ಹಾಳು ತುಕ್ಕನು, ನನ್ನಲ್ಲಿ ನೆಲೆಸಿದ್ದ ನನ್ನ ರಂಭೆಯ ಪ್ರೀತಿಯನ್ನೂ ಕಳೆದನು. ನನ್ನ ಪ್ರಶಸ್ತಿಯನ್ನೂ ಕಳೆಯುತ್ತಿರುವನು. ಇದಕ್ಕೇನು ಮಾಡಲಿ? ಇವನು ನನ್ನ ಮಾರ್ಗದಲ್ಲಿ ಪ್ರಬಲ ಕಂಟಕನಾಗಿರುವನಲ್ಲಾ! ಇವನನ್ನು ಮುರಿಯುವ ಬಗೆ ಹೇಗೆ? (**ಆಲೋಚಿಸಿ**) ಇದೂ ಅಲ್ಲದೆ ವೇದಾರ್ಥವೆಲ್ಲವನ್ನೂ ಮಹಾರಾಷ್ಟ್ರ ಭಾಷೆಯಲ್ಲಿ ಅಭಂಗಗಳ ರೂಪದಿಂದ ಕವಿತ್ವ ಮಾಡಿ ಅವನು ಜನರಲ್ಲಿ ಕೀರ್ತಿಪಡೆದಿರುವನು. ಅವನ ಎದುರಲ್ಲಿ ನಮ್ಮಂತಹ ಸಾಧುಗಳು ತಲೆಯೆತ್ತುವಂತೆಯೇ ಇಲ್ಲ. ಇದರಿಂದ ಈಗ ನಾನು ಇವನನ್ನೂ ಇವನ ಅಭಂಗಗಳನ್ನೂ ಭಂಗಪಡಿಸಲೇ ಬೇಕು. ಗುಟ್ಟಾಗಿ ಮತ್ತೆ ರಂಭೆಯನ್ನು ನನ್ನಂತೆ ತಿರುಗಿಸಿಕೊಳ್ಳಲೇ ಬೇಕು. ಇದಕ್ಕಾಗಿ ನನ್ನ ಮಿತ್ರರಾದ ಭೈರವ ಸಾಧು ಮತ್ತು ತ್ರಿವಿಕ್ರಮ ಸಾಧುಗಳಲ್ಲಿ ಆಲೋಚಿಸಿದರೆ ಮೊದಲಿಂದಲೂ ಈ ತುಕ್ಕನ ಮೇಲೆ ದ್ವೇಷದಿಂದ ಉರಿಯುತ್ತಿರುವ ಅವರು, ಅವನನ್ನು ಮುರಿಯಲು ನನಗೆ ತಕ್ಕ ಸಹಾಯ ಮಾಡಲೇ ಮಾಡುವರು.

ಆದುದರಿಂದ ಈಗಲೇ ಹೋಗಿ ಅವರನ್ನು ಕಂಡು ಮಾತನಾಡಿ ಆ ನೀಚನಿಗೆ ತಕ್ಕುದನ್ನು ಮಾಡುವೆನು. **(ಹೋಗುವನು.)**

## ಸ್ಥಾನ ೫ — ತುಕಾರಾಮನ ಮನೆ

**(ತುಕಾರಾಮನ ಮಗ ಮಹಾದೇವನು ಅಸ್ವಸ್ಥನಾಗಿ ಹಾಸುಗೆಯ ಮೇಲೆ ಮಲಗಿರುವನು. ಜಿಜಾಬಾಯಿಯು ಸಾಣೆಯಕಲ್ಲಿನ ಮೇಲೆ ಔಷಧವನ್ನು ಅರೆಯುತ್ತಿರುವಳು.)**

**ಜಿಜಾಬಾಯಿ**—(೨೭) ಅಯ್ಯೋ! ಕಡೆಯವರೆಗೂ ನನ್ನ ಸಂಸಾರದ ಕಥೆಯು ಹೀಗೆಯೇ ಆಯಿತಲ್ಲಾ! ಈ ಮಕ್ಕಳ ರೋಗಗಳಿಗಾಗಿ ವ್ಯಥೆ ಪಡಲೇ! ಆ ಗಂಡನ ಹುಚ್ಚಿಗಾಗಿ ಚಿಂತಿಸಲೇ! ಮನೆಯಲ್ಲಿ ಕೂಳಿಗೆ ಮಾರ್ಗವಿಲ್ಲದ ಸಂಕಟದಿಂದ ದುಃಖಿಸಲೇ! ಏನು ಮಾಡಲಿ? ಆ ಪುಣ್ಯಾತ್ಮನಾದ ಶಿವಾಜಿ ಮಹಾರಾಜನು ಕಳುಹಿಸಿದ್ದ ಐಶ್ವರ್ಯ ವಾದರೂ ಇದ್ದಿದ್ದರೆ ಎಷ್ಟೋ ಸುಖದಿಂದಿರಬಹುದಾಗಿತ್ತು. ಅದನ್ನು ಆ ಹುಚ್ಚ ಪುಣ್ಯಾತ್ಮರು ಸಿಕ್ಕಿದವರಿಗೆಲ್ಲ ದಾನಮಾಡಿಬಿಟ್ಟರು. ಈಗ ಏನು ಮಾಡಲಿ? ನನ್ನ ಕಷ್ಟವನ್ನು ಯಾರಲ್ಲಿ ಹೇಳಿಕೊಳ್ಳಲಿ? ಆ ಗಂಡ ನೆಂಬ ಗುಂಡುಕಲ್ಲಿನ ಮುಂದೆಯೇ ಕುಳಿತು ಚೆಚ್ಚಿಕೊಳ್ಳೋಣವೆಂದರೆ ಯಾವಾಗಲೂ ಭಜನೆ, ಭಜನೆ, ಭಜನೆಯೆಂದು ಊರಲ್ಲಿ ಅಲೆಯು ತ್ತಿರುವರಲ್ಲದೆ ಅವರು ದಿನದ ಅರವತ್ತು ಗಳಿಗೆಗಳೊಳಗಾಗಿ ಅರೆಗಳಿಗೆ ಯಾದರೂ ಗೃಹಕೃತ್ಯ ವಿಚಾರವನ್ನು ಮನಸ್ಸಿಗೆ ಹಚ್ಚಿಕೊಳ್ಳುವುದೇ ಇಲ್ಲ. ನಾನು ಹೇಗೆ ಈ ಸಂಸಾರವನ್ನು ನಡೆಯಿಸಲಿ? ಆ ಹಾಳು ವಿಠಲನ ಭಜನೆಯಿಂದ ನಮ್ಮ ಮನೆಯಲ್ಲಿ ಕಷ್ಟಗಳು ದಿನದಿನಕ್ಕೆ ಹೆಚ್ಚುತ್ತ ಬಂದವಲ್ಲಾ! ತಾಯಿಾ, ಮಂಗಳಾದೇವೀ, ನನಗೆ ಈ ಕಷ್ಟವನ್ನು ಯಾವಾಗ ತಪ್ಪಿಸುವೆಯೋ ಕಾಣೆನಲ್ಲಾ!

**ಮಹಾದೇವ**—ಅಯ್ಯಯ್ಯೋ! ಅಮ್ಮಾ! ತಲೆ ನೋವು ಬಲವಾಯಿ ತಮ್ಮಾ! **(ಅಳುವನು.)**

**ಜಿಜಾಬಾಯಿ**—ಮಗೂ, ಅಳಬೇಡವಪ್ಪಾ! ಇದೋ ಹಣೆಗೆ ಪಟ್ಟು ಹಾಕುವೆನು. ನಮ್ಮ ಮಂಗಳಾದೇವಿಯ ಪ್ರಸಾದದ ಕುಂಕುಮವನ್ನು ಹಚ್ಚುವೆನು. ದೃಷ್ಟಿಗೆ ನಿವಾಳಿಸುವೆನು. ಸ್ವಲ್ಪ ಸುಮ್ಮನಿರು. **(ಹಣೆಗೆ ಪಟ್ಟನ್ನು ಹಾಕಿ, ಭರಣಿಯಲ್ಲಿದ್ದ ಕುಂಕುಮವನ್ನು ಹಚ್ಚಿ ಕಡ್ಡಿಗಳಿಂದ ಇಳಿಯತೆಗೆದು ಬಾಗಿಲಿಗೆ ಬರುವಳು.)**

**(ಪಂಡಿತರಾವ್, ಹೀರೋಜಿ ಸಹ ಸಯಿಬಾಯಿಯೊಡನೆ ತುಕಾರಾಮನನ್ನು ನೋಡಲು ಬರುವರು.)**

**ಜಿಜಾಬಾಯಿ**—ಅಯ್ಯೋ! ಇದು ಯಾರು? ಯಾರಪ್ಪಾ ನೀವು? ಇಷ್ಟು ಹೊತ್ತಿನಲ್ಲಿ ಇಲ್ಲಿಗೇತಕ್ಕೆ ಬಂದಿರಿ? ಏನು ಕಳ್ಳತನಕ್ಕೆ ಬಂದಿರೋ ಹೇಗೆ? ನಡೆಯಿರಿ, ಹೊರಡಿ; ಇಲ್ಲಿಂದ ಮೊದಲು ಆಚೆಗೆ ಹೊರಡಿ.

**ಪಂಡಿತರಾವ್**—ತಾಯಿ, ನೀವು ನಮ್ಮನ್ನು ಗುರುತಿಸಲಿಲ್ಲವೇ? ನಾವು ಶಿವಾಜೀ ಮಹಾರಾಜನ ಕಡೆಯ ಅಧಿಕಾರಿಗಳು; ಇವರು ನಮ್ಮ ಶಿವಾಜೀ ಮಹಾರಾಜರವರ ಧರ್ಮಪತ್ನಿಯು.

**ಜಿಜಾಬಾಯಿ**—**(ನೋಡಿ ಆಶ್ಚರ್ಯದಿಂದ)** ಅಯ್ಯೋ! ಇದು ನಿಜವೇ! ಛೀ! ಛೀ! ನಾನು ನೋಡದೆ ಹೇಗೆ ಹೇಗೋ ಮಾತನಾಡಿಬಿಟ್ಟೆನಲ್ಲಾ! **(ಸಯಿಬಾಯಿಯನ್ನು ನೋಡಿ)** ಅಮ್ಮಾ! ತಾಯಿ ತಾವು ಕೋಪಮಾಡಿಕೊಳ್ಳಬಾರದು. ನಾನು ಸ್ವಲ್ಪ ದುಡುಕುಬಾಯಿನವಳು, ಬನ್ನಿ, ಒಳಗೆ ಬನ್ನಿ; ಬಹು ದೂರದಿಂದ ಬಂದಿರುವಿರಿ; ನಿಮಗೆ ದೃಷ್ಟಿಯಾಗಿರಬಹುದು. ದೃಷ್ಟಿಗೆ ನಿವಾಳಿಸುವೆನು, ಬನ್ನಿ. **(ಒಳಗೆ ಕರೆದುಕೊಂಡು ಹೋಗಿ ಬಂದು)** ಅಯ್ಯೋ! ನಿಮ್ಮ ಅತ್ತೆಯವರಿಗೆ ಎಂತಹ ಹುಚ್ಚಮ್ಮಾ! ತುಂಬಿದ ಅರಮನೆಯಿಂದ ಇಂತಹ ರಾತ್ರಿಯಲ್ಲಿ ನಿಮ್ಮಂತಹ ಸುಂದರಿಯಾದ ಯುವತಿಯನ್ನು ಹೊರಗೆ ಕಳುಹಿಸಿರುವರಲ್ಲಾ! ಅಯ್ಯೋ, ಇದೆಂತಹ ಅವಿವೇಕ!

**ಸಯಿಬಾಯಿ**—ತಾಯಿ, ನಮ್ಮ ಅತ್ತೆಯವರ ದೋಷವೇನೂ ಇಲ್ಲ. ಮತ್ತೆ ಯಾವ ಉಪಾಯವೂ ತೋರದೆ, ಆಕೆಯು ನಮ್ಮ ಕಷ್ಟ ನಿವಾರಣೆಗೆಂದು ನಿಮ್ಮ ಬಳಿಗೆ ನನ್ನನ್ನು ಕಳುಹಿಸಿದರು.

**ಜಿಜಾಬಾಯಿ**—ಏನು? ನನ್ನ ಬಳಿಗೇ? ಏತಕ್ಕೆ ಕಳುಹಿಸಿದರು? ನಾನೇನು ಮದ್ದು ಮಾಡುವವಳೇ? ಮಂತ್ರ ಹಾಕುವಳೇ? ಅಥವಾ ಉಪದೇಶ ಕೊಡತಕ್ಕವಳೇ? ಯಾವುದೂ ಅಲ್ಲವಲ್ಲಾ! **(ಆಲೋಚಿಸಿ)** ಓಹೋ! ನನ್ನ ಬಳಿಯಲ್ಲಿ ನಮ್ಮ ತೌರುಮನೆಯ ಕುಲದೈವವಾದ ಮಂಗಳಾ ದೇವಿಯ ಪ್ರಸಾದದ ಕುಂಕುಮವಿದೆ. ಅದನ್ನು ಹಚ್ಚಿ ಕೊಂಡರೆ ಮಂಗಳಕರವು. ಬನ್ನಿ, ಕುಂಕುಮವನ್ನು ಹಚ್ಚುವೆನು. **(ಕುಂಕುಮ ಹಚ್ಚುವಳು.)** ಇನ್ನು ಹೇಳಿರಮ್ಮಾ ವಿವರವಾಗಿ, ಇಲ್ಲಿಗೆ ನೀವು ಬಂದ ಕಾರಣವನ್ನು.

**ಪಂಡಿತರಾವ್**—ದೇವಿಯವರು ತುಕಾರಾಮ ಗುರು ಮಹಾರಾಜರ ದರ್ಶನಕ್ಕಾಗಿ ಬಂದಿರುವರು.

**ಜಿಜಾಬಾಯಿ**—ಸರಿ; ಅವರ ದರ್ಶನಕ್ಕೆ ಮಂಗಳಾರತಿ ಎತ್ತಿದರು! ಅವರಿಗೊಂದು ವಿಧದ ಹುಚ್ಚು, ನಿಮಗೊಂದು ವಿಧದ ಹುಚ್ಚು. ನಾನೇನೆಂದು ಹೇಳಲಿ! ಅವರ ದರ್ಶನಕ್ಕೆಂದು ಬಂದ ಆ ಶಿವಾಜಿ ಮಹಾರಾಜನನ್ನು ಸನ್ಯಾಸಿಯನ್ನಾಗಿ ಮಾಡಿ ಕಳುಹಿಸಿಬಿಟ್ಟರು. ಈಗ ಮಹಾರಾಣಿಯವರು ಬಂದಿರುವರು. ಇನ್ನು ಇವರಿಗೆ ಯಾವ ಗತಿಯಾಗುವುದೋ ನಾನು ಕಾಣೆ.

**ಪಂಡಿತರಾವ್**—ತಾಯಿ, ಹಾಗಲ್ಲ; ನಮ್ಮ ಶಿವಾಜಿ ಮಹಾರಾಜರು ವೈರಾಗ್ಯವನ್ನು ಧರಿಸಿರುವುದರಿಂದ ರಾಜ್ಯದ ಮೂಲವೇ ಸಡಿಲುತ್ತಿದೆ. ಆದುದರಿಂದ ಅವರನ್ನು ಮತ್ತೆ ರಾಜ್ಯಕ್ಕೆ ಬರುವಂತೆ ಮಾಡಲು, ಗುರುಮಹಾರಾಜರನ್ನು ಪ್ರಾರ್ಥಿಸಿಕೊಳ್ಳಲು ಬಂದಿರುವೆವು.

**ಜಿಜಾಬಾಯಿ**— ಪಂಡಿತರಾಯರೇ! ಈಗ ನಿಮಗೂ ಹುಚ್ಚು ಹಿಡಿಯಿತೆಂದು ಹೇಳಬೇಕು. ಇಂತಹ ನಮ್ಮ ಹುಚ್ಚು ಯಜಮಾನರ ಕೈಯಿಂದ, ಸಡಲಿರುವ ರಾಜ್ಯದ ಮೂಲವನ್ನು ಬಿಗಿಮಾಡಲು ಸಾಧ್ಯವಾಗಿದ್ದರೆ, ನಮ್ಮ ಕೈಗೆ ಜೋಳಿಗೆಯೂ ನಮ್ಮ ಮನಗೆ ಹರುಕು ಮಾಳಿಗೆಯೂ ಏತಕ್ಕೆ ಆಗುತ್ತಿದ್ದವು? ಹೊಟ್ಟೆಗೆ ಹಿಟ್ಟಿಲ್ಲದೆ ಮೈಗೆ ಬಟ್ಟೆಯಿಲ್ಲದೆ ಅಲೆಯುತ್ತಿರುವ ಅವರನ್ನು ನಂಬಿದರೆ ಕಡೆಗೆ

ನೀವೂ ಅವರಂತೆಯೇ ಆಗುತ್ತೀರಿ, ಅಷ್ಟೆ! (**ಸಯಿಾಬಾಯಿಯನ್ನು ನೋಡಿ**) ತಾಯಿಾ, ರಾಣಿಯವರೇ, ನಿತ್ಯ ಪದ್ಧತಿಯಂತೆ ಈ ದಿನವೂ ಸಹ ನಿಮ್ಮ ಶಿವಾಜಿ ಮಹಾರಾಜರು, ನಮ್ಮ ಹುಚ್ಚು ಯಜಮಾನರ ಬಳಿಗೆ ಬರಬಹುದು. ಆವರೆಗೂ ನೀವಿಲ್ಲಿಯೇ ಇದ್ದು ಅವರು ಬಂದಕೂಡಲೆ ಸ್ವಲ್ಪವೂ ಹೆದರದೆ ರಟ್ಟೆ ಹಿಡಿದು ದರದರ ದರನೆ ಮನೆಗೆ ಸೆಳೆದುಕೊಂಡೇ ಹೋಗಿ ಬಿಡಿ.

**ಸಯಿಾಬಾಯಿ**—ಸರಿ! ಸರಿ! ನಾನು ಅವರಲ್ಲಿ ಆ ರೀತಿ ವರ್ತಿಸಿದರೆ ನನಗೆ ತಕ್ಕ ಪೂಜೆಯೇ ಆದೀತು.

**ಜಿಜಾಬಾಯಿ**—ಪೂಜೆಯೇ? ಪೂಜೆ? **ಪೂಜೆ** ಮಾಡಿದರೆ ನೀವು ಸುಮ್ಮ ನಿರುವಿರಾ? ನಿಮಗೆ ಬಾಯಿಲ್ಲವೇ? ಪಟಪಟಪಟಪಟನೆ ಹುರುಳಿ ಕಾಳು ಹುರಿದಂತೆ ಮಾತುಗಳನ್ನು ಒಂದರ ಹಿಂದೆ ಒಂದು, ಒಂದರ ಹಿಂದೆ ಒಂದು ಆಡುತ್ತಿದ್ದರೇ........ಗಂಡಸರು ದಾರಿಗೆ ಬರುವುದು; ನಾನು ಹಾಗೆ ಇರುವುದರಿಂದಲೇ, ನಮ್ಮ ಹುಚ್ಚು ಪುಣ್ಯಾತ್ಮರು ಮನುಷ್ಯನಂತೆ ಸ್ವಲ್ಪ ತಗ್ಗಿದ್ದಾರೆ. ಇಲ್ಲವಾಗಿದ್ದರೆ, ನನ್ನನ್ನು ಬಾಣಲಿಯಲ್ಲಿ ಹಾಕಿ ಹುರಿದು ಮುಕ್ಕಿಬಿಡುತ್ತಿದ್ದರು.

**ಸಯಿಾಬಾಯಿ**—ಸರಿ, ಸರಿ, ಈಗ ಸಾಧು ಮಹಾರಾಜರು ಎಲ್ಲಿದ್ದಾರೆ?

**ಜಿಜಾಬಾಯಿ**—(**ಬೇಸರದಿಂದ**) ಎಲ್ಲಿರುವರೋ! ವಿಠಲನಿಗಾಗಿ ಅರಚಿ ಕೊಳ್ಳುತ್ತ ತಾಳಗಳನ್ನು ಚೆಚ್ಚಿಕೊಂಡು ದೇವಸ್ಥಾನದಲ್ಲಿ ಕುಕ್ಕರಿಸಿರಬಹುದು.

**ಸಯಿಾಬಾಯಿ**—ಹೇಗಾದರೂ, ತಾಯಿಾ, ದಯವಿಟ್ಟು ಒಂದಾವೃತ್ತಿ ನನಗಾ ಮಹನೀಯರ ದರ್ಶನಮಾಡಿಸಿ. ನಿಮ್ಮ ಕಾಲಿಗೆರಗಿ ಬೇಡಿಕೊಳ್ಳುವೆನು. (**ಕಾಲಿಗೆ ಬೀಳುವಳು.**)

**ಜಿಜಾಬಾಯಿ**—(ಎಬ್ಬಿಸಿ) ಏಳಿರಮ್ಮಾ ಏಳಿ, ಅಳಬೇಡಿ. ನಮ್ಮ ಮಗುವಿಗೆ ಸ್ವಲ್ಪ ಔಷಧವನ್ನು ಕುಡಿಸಿ ಒಂದು ಗಳಿಗೆಯುವರಿಗೆ ನೋಡುತ್ತೇನೆ. ಅನಂತರ ಗುಣವಾಗದಿದ್ದರೆ ಈ ಮಗುವನ್ನೂ ಎತ್ತಿಕೊಂಡು ಹೋಗಿ, ಗುಂಡುಕಲ್ಲಿನಿಂದ ವಿಠಲನ ತಲೆಯನ್ನು ಒಡೆದುಬಿಡುತ್ತೇನೆ.

ನೀವೂ ನನ್ನೊಡನೆ ಬನ್ನಿ. ಅಲ್ಲಿ ನಮ್ಮ ಗಂಡಸರೂ ಇರುವರು. ಅವರನ್ನು ಹಿಡಿದು ನಿಮ್ಮ ವಶಕ್ಕೆ ಒಪ್ಪಿಸುತ್ತೇನೆ. (ಮಗುವಿಗೆ ಔಷಧವನ್ನು ಕುಡಿಸುವಳು.)

**ತುಕಾರಾಮ**—(ಭಜನೆ ಮಾಡುತ್ತ ಪ್ರವೇಶಿಸುವನು.) (೨೮)

(ಪಂಡಿತರಾವ್, ಹೀರೋಜಿ, ಸಯಿಬಾಯಿ ಮೊದಲಾದವರು ತುಕಾರಾಮನಿಗೆ ನಮಸ್ಕರಿಸುವರು. ತುಕಾರಾಮನೂ ಅವರಿಗೆ ನಮಸ್ಕರಿಸುವನು.)

**ಜಿಜಾಬಾಯಿ**—(ಮಗುವನ್ನು ಹಿಡಿದುಕೊಂಡು ಗುಂಡುಕಲ್ಲನ್ನು ಹಿಡಿದು ಕೋಪದಿಂದ ಹೊರಟು) ಈ ದಿನ ಆ ವಿಠಲನ ತಲೆಯನ್ನು ಒಡೆದುಹಾಕುವುದೇ ನಿಜ! ಆದುದಾಗಲಿ.

**ಮಹಾದೇವ**—ಅಯ್ಯೋ! ಅಯ್ಯೋ!! ಎಳೆಯಬೇಡವಮ್ಮಾ! ಆ ವಿಠಲನ ಕೋಪವನ್ನು ನನ್ನ ಮೇಲೆ ಏತಕ್ಕೆ ತೀರಿಸಿಕೊಳ್ಳುವೆ? ನಾನು ತಡೆಯಲಾರೆನು.

**ತುಕಾರಾಮ**—(ಮಹಾದೇವನನ್ನು ತನ್ನ ಬಳಿಗೆ ಕರೆದುಕೊಂಡು ಜಿಜಾಬಾಯಿಯನ್ನು ನೋಡಿ) ಎಲೆ! ಎಲೆ!! ಇದೇನು? ಈ ಗುಂಡುಕಲ್ಲೇನು? ಈ ಆವೇಶವೇನು? ಈ ಅವತಾರವೇನು? ನಿಲ್ಲು, ಸ್ವಲ್ಪ ನಿಲ್ಲು, ವಿಠಲನನ್ನು ಭಜಿಸು, ಹೀಗೆ ಬಾ.

**ಜಿಜಾಬಾಯಿ**—ವಿಠಲನನ್ನು ಭಜಿಸಬೇಕೋ? ವಿಠಲನನ್ನು! ಅವನ ತಲೆಯನ್ನೊಡೆಯಬೇಕು!

**ತುಕಾರಾಮ**—ಅದೇತಕ್ಕೆ? ನಮ್ಮ ವಿಠಲನು ನಿನಗೇನು ಅಪರಾಧವನ್ನು ಮಾಡಿದನು?

**ಜಿಜಾಬಾಯಿ**—ನೀವು ನಿತ್ಯವೂ ವಿಠಲ ವಿಠಲ ಎಂದು ಆ ವಿಠಲನು ನಿಮಗೆ ಎಲ್ಲ ಸೌಖ್ಯವನ್ನೂ ಕೊಟ್ಟುಬಿಡುವನೆಂದು ಅವನಿಗಾಗಿ ಚಚ್ಚಿಕೊಳ್ಳುತ್ತಿರುವಿರಲ್ಲಾ! ಆ ನಿಮ್ಮ ವಿಠಲನು, ಮೂರು ದಿನಗಳಿಂದಲೂ ನರಳುತ್ತಿರುವ ನಮ್ಮ ಮಗುವಿನ ರೋಗವನ್ನೇತಕ್ಕೆ ವಾಸಿಮಾಡಲಿಲ್ಲ?

**ತುಕಾರಾಮ**—ಅದಕ್ಕೆ ನೀನು ನನ್ನ ಬಳಿಯಲ್ಲಿರುವ ಔಷಧವನ್ನು ಕೊಡಿಸಲಿಲ್ಲ. ಮಗೂ ಮಹಾದೇವಾ, ಇದೋ! ನಮ್ಮ ಪಾಂಡು ರಂಗನ ಪ್ರಸಾದವನ್ನು ತೆಗೆದುಕೋ; ಇದೇ ಸಂಜೀವನವು. (**ತುಲಸಿ ಪ್ರಸಾದವನ್ನು ಕೊಡುವನು.**)

**ಮಹಾದೇವ**—(**ತುಲಸೀ ಪ್ರಸಾದವನ್ನು ಅಗಿದು ನುಂಗಿ**) ಅಮ್ಮಾ! ಅಮ್ಮಾ! ತಲೆ ನೋವು ನಿಂತು ಹೋಯಿತಮ್ಮಾ! ಈಗ ನಾನು ಆರೋಗ್ಯ ವಾಗಿದ್ದೇನೆ.

**ಜಿಜಾಬಾಯಿ**—ನೋಡಿದೆಯೋ! ನಮ್ಮ ಮಂಗಳಾದೇವಿಯ ಕುಂ ಕುಮ ಹಚ್ಚಿದಾಗಲೇ ನಿನಗೆ ಆರೋಗ್ಯವಾಗುವುದೆಂದು ನನಗೆ ಗೊತ್ತಿತ್ತು. (**ತುಕಾರಾಮನ ಬಳಿಗೆ ಬಂದು**) ಅದೆಲ್ಲವೂ ಇರಲಿ! ಆ ಶಿವಾಜಿ ಮಹಾರಾಜನಿಗೆ ಏನು ಗತಿ ಹಿಡಿಸಿದಿರಿ? ಇದೋ ನೋಡಿ, ಆತನ ರಾಣಿಯಾದ ಈಕೆಯು, ನಿತ್ಯ ದರಿದ್ರಳಾದ ನನ್ನ ಬಳಿಗೆ ಬಂದು ನನ್ನ ಕಾಲಿಗೆ ಬಿದ್ದು ತನಗೆ ಮಾಂಗಲ್ಯದಾನ ಮಾಡಬೇಕೆಂದು ಬೇಡಿಕೊಂಡು ಗೋಳಾಡುತ್ತಿರುವಳು. ಈಗ ಈಕೆಗೇನನ್ನು ಹೇಳ ಬೇಕು? ಗಂಡನನ್ನೆಲ್ಲಿಂದ ತಂದುಕೊಡಬೇಕು? ಪಾಪ! ಅತ್ತು ಅತ್ತೂ ಕಣ್ಣುಗಳು ಹುಣಿಯ ಕೆಂಡಗಳಾಗಿವೆ. (**ಸಯಿಾಬಾಯಿಯನ್ನು ಕೈಹಿಡಿದು ಕರೆತಂದು**) ಬನ್ನಿರಮ್ಮಾ ಬನ್ನಿ; ಈ ಕಡೆ ಬನ್ನಿ, ಇವರ ಕಾಲಿಗೆ ಬೀಳಿ.

**ಸಯಿಾಬಾಯಿ**—(**ತುಕಾರಾಮನ ಕಾಲಿಗೆರಗುವಳು.**)

**ತುಕಾರಾಮ**—ಪಾಂಡುರಂಗ! ಪಾಂಡುರಂಗ!! ತಾಯಿಾ, ನಮ್ಮ ಪಾಂಡುರಂಗನನ್ನು ಭಜಿಸಿ. ಆತನು ನಿಮಗೆ ಮಂಗಳವನ್ನುಂಟು ಮಾಡುವನು.

**ಜಿಜಾಬಾಯಿ**—ಬೇಡಿರಮ್ಮಾ ಬೇಡಿ! ನಿಜವಾಗಿಯೂ ಬೇಡಿ. ಆ ಪಾಂಡುರಂಗನ ಗೊಡವೆಯೇ ನಿಮಗೆ ಬೇಡಿ. ಆ ಮಾಯಾವಿಯನ್ನು ನೀವು ನಂಬಲೇ ಬೇಡಿ. ಅವನ ವಿಚಾರವು ನಿಮಗೆ ತಿಳಿಯದು. ನಮ್ಮ ದೇವರ ಸತ್ಯವನ್ನು ನಾವೇ ಬಲ್ಲೆವು. ನೀವು ಸುಮ್ಮನೆ ಇವರ ಕಾಲಿಗೆ ಬಿದ್ದು ನಿಮ್ಮ ಗಂಡನನ್ನು ಬರಮಾಡಿಕೊಡುವಂತೆ ಕೇಳಿ

ಕೊಳ್ಳಿ. (ಪಕ್ಕದಲ್ಲಿ ನೋಡಿ ಶಿವಾಜಿಯು ಬರುತ್ತಿರುವುದನ್ನು ಕಂಡು) ಅದೋ! ಅದೋ!! ಮಹಾರಾಜರೇ ಬರುತ್ತಿರುವರು. ಅವರನ್ನು ಕೈಹಿಡಿದು ಹಾಗೆಯೇ ದರದರನೆ ಮನೆಗೆಳೆದುಕೊಂಡು ಹೋಗಿಬಿಡಿ.

**ಶಿವಾಜಿ**—(ಭಜನೆ ಮಾಡುತ್ತ ಪ್ರವೇಶಿಸುವನು.)

**ಸಯಿರಾಬಾಯಿ**—(ಓಡಿಬಂದು ಪಾದಗಳಮೇಲೆ ಬಿದ್ದು) (೨೯) ಆರ್ಯಪುತ್ರಾ! ಪಾದಕಮಲಗಳನ್ನೇ ನಂಬಿರುವ ನನ್ನನ್ನು ತಾವು ದೂರಮಾಡ ಕೂಡದು. ಕೈಹಿಡಿದು ಕಾಪಾಡಬೇಕು.

**ಶಿವಾಜಿ**—ಎಲ್ಲಿ ಹೋದರೂ ಈ ಸಂಸಾರಮಾಯೆಯು ಅಡ್ಡಲಾಗಿ ಬರುತ್ತಿರುವುದಲ್ಲಾ! ಅಯ್ಯೋ! ಪಾಂಡುರಂಗನ ವೈಕುಂಠ ಮಂದಿರದಂತೆ ಕಾಮ ಮೋಹಾದಿಗಳ ಪ್ರವೇಶಕ್ಕೆ ಅವಕಾಶವಿಲ್ಲದೆ ಸದ್ಗುರು ತುಕಾರಾಮರಂತಹ ಮಹನೀಯರು ಕಾವಲಿರುವ ಈ ಪರಿಶುದ್ಧ ಪ್ರದೇಶದಲ್ಲಿಯೂ ಮಾಯಾ ಪ್ರತಿಬಂಧಕವೇ? ಛೀ! ಛೀ!! ಮಹಾತ್ಮರ ಸಂದರ್ಶನಕ್ಕೆ ಹೋಗುವ ಮಾರ್ಗವನ್ನು ಅಡ್ಡಗಿಸುವ ಈ ಕಲ್ಲನ್ನು ಆಚೆಗೆ ನೂಕಲೇ ಬೇಕು. (ಸಯಿರಾಬಾಯಿಯನ್ನು ಬೀಳುವಂತೆ ನೂಕಿ ಮುಂದೆ ಹೋಗಿ ತುಕಾರಾಮರಿಗೆ ನಮಸ್ಕರಿಸುವನು.)

**ಜಿಜಾಬಾಯಿ**—(ಬೀಳುತ್ತಿದ್ದ ರಾಣಿಯನ್ನು ಹಿಡಿದೆತ್ತಿ) (ಆತ್ಮಗತ) ಅಯ್ಯೋ! ಈ ಮಹಾರಾಜನ ಮುಖಕ್ಕೆ ಮಂಗಳಾರತಿ ಎತ್ತಿದರು! (ರಾಜನನ್ನು ನೋಡಿ) ಅಯ್ಯೋ! ಮಹಾರಾಜಾ! "ಕರೆದು ಹೆಣ್ಣುಕೊಟ್ಟರೆ ಮಲ್ಲೋಗರ ಹಿಡಿಯಿತು," ಎಂಬಂತೆ ಈ ಕಟುಕತನವೆಲ್ಲಿಯಾದರೂ ಉಂಟೇನಪ್ಪಾ! ಬಂಗಾರದಂತಹ ಹೆಣ್ಣು ಇಷ್ಟು ದೂರ ದುಃಖದಿಂದ ನಡೆದು ಬಂದು ಕಾಲಿಗೆ ಬಿದ್ದು ಬೇಡಿಕೊಳ್ಳುತ್ತಿರುವಲ್ಲಿ ಕರುಣ ವಿಲ್ಲದೆ ತಳ್ಳಿಬಿಟ್ಟಿರಲ್ಲಾ! ಇದು ನ್ಯಾಯವೋ? ಇದಕ್ಕೇನೋ ನೀವೀಕೆಯನ್ನು ಮದುವೆಯಾದುದು? ಛೀ! ಛೀ!! ಹೆಂಡತಿಯನ್ನು ಪಾಲಿಸಲಾರದ ನೀವು ಇನ್ನು ರಾಜ್ಯವನ್ನು ಪಾಲಿಸುವಿರಾ! ಸಾಕು! ಈ ನಿಮ್ಮ ಬುದ್ಧಿಗೂ ವಿವೇಕಕ್ಕೂ ನಾನೇನೆಂದು ಹೇಳಲಿ! ಇಂತಹ ಡಂಭದಿಂದ ಪ್ರಯೋಜನವಿಲ್ಲ. ನಿಮ್ಮಂತಹ ರಾಜರು ಹೀಗೆ ಲೋಕ ವ್ಯವಹಾರವನ್ನು ಬಿಡಬಾರದಪ್ಪಾ!

**ಶಿವಾಜಿ**—ಈ ಲೋಕವ್ಯವಹಾರ ಮಮತೆಯಿಂದಲೇ ಮನುಷ್ಯರು ಶಾಶ್ವತವಾದ ಪರಲೋಕದ ನಿತ್ಯಾನಂದವನ್ನು ಕಳೆದುಕೊಳ್ಳುತ್ತಿರುವರು. ಇದನ್ನು ಪೂಜ್ಯರಾದ ತುಕಾರಾಮ ಗುರು ಮಹಾರಾಜರಿಂದ ಅರಿತು ನಾನು ವಿಠಲನಿಗೆ ದಾಸನಾದೆನು. ಆದುದರಿಂದ ಇನ್ನು ನನಗೆ ಈ ಮಾಯಾ ಮಮತೆಗಳು ಬೇಡ.

**ಜಿಜಾಬಾಯಿ**—ಚೆನ್ನಾಯಿತು! ಈ ಹುಚ್ಚು ವೇದಾಂತದ ಮಾತುಗಳನ್ನು ಒಂದು ಕಡೆಗೆ ಕಟ್ಟಿರಿಸಿ. ಏನೂ ತಿಳಿಯದೆ ಸಂಸಾರದಲ್ಲಿ ಮಮತೆಯಿಲ್ಲದ ಮಂಕು ಪುಣ್ಯಾತ್ಮರ ಮಾತಿಗೆ ಬೆರಗಾಗಿ, ಹುಚ್ಚು ಹುಚ್ಚಾಗಿ ಅವರು ಹೇಳಿದುದೆಲ್ಲಕ್ಕೂ ಕಿವಿಗೊಟ್ಟು ಆನಂದಕರವಾದ ನಿಮ್ಮ ರಾಜಭೋಗಗಳನ್ನೂ ರಾಜ್ಯಪಾಲನೆಯನ್ನೂ ಪ್ರಪಂಚ ವ್ಯಾಪಾರಗಳನ್ನೂ ಏತಕ್ಕೆ ಕೆಡಿಸಿಕೊಳ್ಳುವಿರಿ?

**ತುಕಾರಾಮ**—ಮಹಾರಾಜಾ, ನನ್ನ ಪತ್ನಿಯು ಅವಜ್ಞತೆಯಿಂದ ಮಾತನಾಡಿದರೂ ನಿನಗೆ ಕಾಲೋಚಿತ ಕರ್ತವ್ಯವನ್ನೇ ಸೂಚಿಸಿರುವಳು. ಹಿಂದೆ ಭಾರತಯುದ್ಧ ಸಮಯದಲ್ಲಿ ಶ್ರೀಕೃಷ್ಣ ಪರಮಾತ್ಮನು ರಥವನ್ನು ಕೌರವ ಪಾಂಡವರ ಸೈನ್ಯಗಳ ಮಧ್ಯದಲ್ಲಿ ತಂದು ನಿಲ್ಲಿಸಿದಾಗ ಪಾರ್ಥನು ಆತನನ್ನು ಏನೆಂದು ಪ್ರಶ್ನೆಮಾಡಿದನು? ಅದಕ್ಕೆ ಕೃಷ್ಣಪರಮಾತ್ಮನು ಆತನಿಗೆ ಯಾವ ಉಪದೇಶವನ್ನು ಮಾಡಿದನು? ಎಂಬ ವಿಚಾರವನ್ನು ಬಲ್ಲೆಯಷ್ಟೆ! ಅದೇನೆಂಬುದನ್ನು ಸ್ವಲ್ಪ ಹೇಳು.

**ಜಿಜಾಬಾಯಿ**—ಸರಿ! ಯಾವಾಗಲೋ ಯಾವನೋ ಯಾರಿಗೋ ಎಲ್ಲಿಯೋ ಏನನ್ನೋ ಹೇಳಿದನಂತೆ, ಆ ಕಂತೆಯ ಪುರಾಣವನ್ನು ಈಗ ಇಲ್ಲಿ ಇವರು ಒದರಬೇಕಂತೆ! ಅದೆಲ್ಲವೂ ಹಾಗಿರಲಿ! ಸದ್ಯಕ್ಕೆ ನೀವು ರಾಜನಿಗೆ ಹೇಳಬೇಕಾದುದನ್ನು ಹೇಳಿ.

**ಶಿವಾಜಿ**—ಕೌರವ ಸೈನ್ಯವನ್ನು ನೋಡಿ ಅರ್ಜುನನು ವ್ಯಥೆಪಟ್ಟು "ಇಂತಹ ಆಪ್ತ ಮಿತ್ರ ಬಂಧು ಗುರುಗಳನ್ನು ವಧಿಸಿ ನಾನು ರಾಜ್ಯವನ್ನಾರ್ಜಿಸಲೊಲ್ಲೆನು. ನಾನು ಜನ್ಮಾವಧಿಯೂ ವನವಾಸದಲ್ಲಿಯೇ

ಬೇಕಾದರೂ ಇದ್ದುಬಿಡುವೆನು. ಯುದ್ಧಮಾಡಲೊಲ್ಲೆನು,'' ಎಂದು ತನ್ನ ಗಾಂಡೀವ ಧನುಸ್ಸನ್ನು ನೆಲಕ್ಕೆ ಎಸೆದನು.

**ತುಕಾರಾಮ**—ನೋಡಿದೆಯೋ! ಇಂತಹ ನಿಷ್ಕಾಮ ಬುದ್ಧಿಯುಳ್ಳ ಪಾರ್ಥನ ವೈರಾಗ್ಯವನ್ನು ನೋಡಿ ಶ್ರೀ ಕೃಷ್ಣ ಪರಮಾತ್ಮನು ಆತನಿಗೆ ಪವಿತ್ರವಾದ ಗೀತೆಯುನ್ನುಪದೇಶಮಾಡಿದನು. ಅದರ ಸಾರವು ನಿನಗೆ ತಿಳಿದೇ ಇರುವುದು. ಲೋಕದಲ್ಲಿ ಜ್ಞಾನಿಯಾದವನಿಗೆ ಕರ್ಮವು ಅನವಶ್ಯವಾದರೂ ಲೋಕಸಂಗ್ರಹಾರ್ಥವಾಗಿ ಸ್ವಧರ್ಮಾನುಸಾರ ವಾದ ಕರ್ಮವನ್ನು ಅವನು ಮಾಡಲೇಬೇಕು.

**ಶ್ಲೋ॥** ಕರ್ಮಣ್ಯೈವಹಿ ಸಂಸಿದ್ಧಿಮಾಸ್ಥಿತಾ ಜನಕಾದಯಃ ||
ಲೋಕಸಂಗ್ರಹಮೇವಾಪಿ ಸಂಪಶ್ಯನ್ ಕರ್ತುಮರ್ಹಸಿ॥

ಎಂದು ಶ್ರೀ ಕೃಷ್ಣ ಪರಮಾತ್ಮನು ಹೇಳಿರುವ ಗೀತಾ ವಾಕ್ಯದ ಭಾವವನ್ನು ಗ್ರಹಿಸಿ ನಿಷ್ಕಾಮ ಕರ್ಮವನ್ನಾಚರಿಸುವವನು ಪರ ಮಾತ್ಮನ ಅನುಗ್ರಹಕ್ಕೆ ಪಾತ್ರನಾಗುವನು. ಅಲ್ಲದೆ,

**ಶ್ಲೋ॥** ಯದ್ಯದಾಚರತಿ ಶ್ರೇಷ್ಠಸ್ತತ್ತದೇವೇತರೋಜನಃ ||
ಸಯತ್ಪ್ರಮಾಣಂ ಕುರುತೇ ಲೋಕಸ್ತ ದನುವರ್ತತೇ ||

ಅಂದರೆ ಸತ್ಪುರುಷನಾದವನು ಯಾವ ರೀತಿಯಿಂದ ನಡೆಯು ವನೋ ಅದರಂತೆಯೇ ಇತರರೂ ಆಚರಿಸುವರು. ಆತನು ಯಾವುದು ಸತ್ಯವೂ ಪ್ರಮಾಣವೂ ಎಂದು ನಿಶ್ಚಯಿಸುವನೋ ಅದರಂತೆಯೇ ಲೋಕವೂ ಅನುವರ್ತಿಸುವುದು. ಆದುದರಿಂದ ಬಹು ಮಂದಿಗೆ ಮಾರ್ಗದರ್ಶಿಗಳಾಗಿದ್ದ ಜನಕರಾಜಾದಿಗಳು ಕರ್ಮದಿಂದಲೇ ಅಲ್ಲವೇ ಜ್ಞಾನಸಿದ್ಧಿಯುನ್ನು ಪಡೆದುದು? ಆದಕಾರಣ ಧರ್ಮದಿಂದ ರಾಜ್ಯ ವನ್ನಾಳುತ್ತ, ಜನರು ಮಾರ್ಗ ತಪ್ಪದ ರೀತಿಯುಲ್ಲಿ ಎಚ್ಚರದಿಂದ ನೋಡಿಕೊಳ್ಳುತ್ತಿರಬೇಕಾದ ಕರ್ತವ್ಯವುಳ್ಳ ನಿನ್ನಂತಹ ಮಹಾರಾಜನು ಸ್ವಧರ್ಮಾನುಸಾರವಾದ ಕರ್ಮವನ್ನು ತಪ್ಪದೆ ಆಚರಿಸಲೇ ಬೇಕು. ಅಲ್ಲದೆ ನೀನು ನಿಮ್ಮ ಮಾತಾಪಿತೃಗಳ ಗರ್ಭದಲ್ಲಿ ಸಂಪೂರ್ಣ ಕ್ಷಾತ್ರ ತೇಜದಿಂದ ಜನಿಸಿ ಮತದಲ್ಲಿಯೂ ಮನೋವೃತ್ತಿಯಲ್ಲಿಯೂ ಗುಣ

ದಲ್ಲಿಯೂ ಕರ್ಮದಲ್ಲಿಯೂ ಸಹ ಕ್ಷತ್ರಿಯನಾಗಿ ಪ್ರಕಾಶಿಸುತ್ತಿರುವೆ. ಹೀಗಿರಬೇಕಾದುದೇ ಭಗವತ್ಸಂಕಲ್ಪವು. ನಿನ್ನಿಂದಲೇ ನಿಮ್ಮ ಕುಲ ಕ್ರಮಾಗತವಾದ ಕ್ಷತ್ರಿಯ ಧರ್ಮಕ್ಕೆ ಭಂಗವುಂಟಾದರೆ, ಆ ಭಗವಂತನ ಆಜ್ಞೆಯನ್ನು ಪಾಲಿಸದೆ ಇದ್ದ ಪಾತಕವು ನಿನಗೆ ಸಂಘಟಿಸುವುದೇ ನಿಶ್ಚಯವು. ಈಗ ನೀನು ಜ್ಞಾನೋಪದೇಶವನ್ನು ಪಡೆದ ಮಾತ್ರಕ್ಕೇ ಸ್ವಧರ್ಮ ಕರ್ಮಗಳನ್ನು ತ್ಯಾಗಮಾಡುವುದು ಅನುಚಿತವು. ಅದರಿಂದ ಪಾಪವು ಸಂಘಟಿಸುವುದು. "ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ" ಎಂಬ ಗೀತಾ ವಾಕ್ಯವು ನಿನಗೆ ತಿಳಿಯದೇ? ಸ್ವಧರ್ಮವನ್ನು ಬಿಟ್ಟು ಪರಧರ್ಮವನ್ನು ಶ್ರೇಷ್ಠವೆಂದು ಅನುಸರಿಸುವವನು ಉಭಯಧರ್ಮ ಭ್ರಷ್ಟನಾಗಿ ಸ್ವಧರ್ಮಾನುಸರಣದಿಂದ ಲಭಿಸಬಹುದಾಗಿದ್ದ ಉತ್ತಮ ಫಲವನ್ನು ಕಳೆದುಕೊಂಡು ದುಷ್ಫಲಾನುಭವಿಯಾಗಿ ದೈವಕಟಾಕ್ಷಕ್ಕೆ ದೂರನಾಗುವನು. ಆದುದರಿಂದ ನೀನು ಅಂತರ್ಯದಲ್ಲಿ ಜ್ಞಾನಮಾರ್ಗವನ್ನು ಬಿಡದೆ ವರ್ತಿಸುತ್ತಿದ್ದರೂ ಬಾಹ್ಯದಲ್ಲಿ ಕುಲಧರ್ಮೋಚಿತವಾದ ಲೌಕಿಕ ಸಂಬಂಧವನ್ನು ಬಿಡಬಾರದು.

**ಶಿವಾಜಿ**—ಗುರುಮಹಾರಾಜಾ, ತಾವು ಹೇಳುವುದು ನನಗಾಶ್ಚರ್ಯಕರವಾಗಿದೆ. ಪರಮಾತ್ಮ ಧ್ಯಾನದಲ್ಲಿ ಚಿತ್ತವನ್ನು ಲೀನಮಾಡಿರುವವನು ಸಂಸಾರ ಬಂಧನಕ್ಕೆ ಸಿಕ್ಕಿ ನರಳುವುದರಿಂದ ಫಲವೇನು? ಅಲ್ಲದೆ ನಿತ್ಯಾನಂದಮಯವಾದ ಮುಕ್ತಿ ಸಾಧನಕ್ಕೆ ಸೋಪಾನಭೂತವಾದ ಭಕ್ತಿಯೋಗಕ್ಕೆ ಸಂಸಾರ ಸಂಗವು ಅಂಧಕಾರ ಜನಕವಾದ ಪ್ರಬಲ ಪ್ರತಿಬಂಧಕವಲ್ಲವೇ? ಅಂತಹ ಭವ ಬಂಧನಕ್ಕೆ ಮತ್ತೆ ಸೇರಬೇಕೆಂದು ತಾವು ನನಗೆ ಬೋಧಿಸುವುದು ಉಚಿತವೇ!

**ತುಕಾರಾಮ**—ಮಹಾರಾಜಾ, ನಿಸ್ಸಂಗರಾಗಿ ಭಕ್ತಿಯೋಗದಿಂದ ಮುಕ್ತಿಮಾರ್ಗವನ್ನು ಹಿಡಿಯುವುದು ಸಂನ್ಯಾಸಿಗಳ ಮತವು ಮತ್ತು ವಾನಪ್ರಸ್ಥರಿಗೆ ಅರ್ಹವು. ಸಂಸಾರಿಯಾದ ನೀನು ನಿನ್ನ ಗೃಹಸ್ಥ ಧರ್ಮವನ್ನಾಚರಿಸುವುದನ್ನು ಬಿಟ್ಟು, ಧರ್ಮಾದಿ ಪುರುಷಾರ್ಥಗಳಲ್ಲಿ ನಿನ್ನನ್ನೇ ನಂಬಿದ ಪತ್ನಿಯನ್ನೂ, ವಾರ್ಧಕದಲ್ಲಿ ನಿನ್ನ ಪೋಷಣೆ

ಯನ್ನಪೇಕ್ಷಿಸಿರುವ ತಾಯಿಯನ್ನೂ, ತಂದೆಯೆಂದು ನಿನ್ನನ್ನು ಭಾವಿಸಿ, ನಿನ್ನ ಧರ್ಮಪರಿಪಾಲನೆಯಿಂದ ಸುಖಾನುಭವಿಗಳಾಗಬೇಕೆಂದು ಬಯಸುತ್ತಿರುವ ನಿನ್ನ ರಾಜ್ಯ ಪ್ರಜೆಗಳನ್ನೂ ಕೈಬಿಟ್ಟು ಅವರಿಗೆ ಮೋಸಮಾಡಿ ಪರಮೇಶ್ವರನನ್ನು ಭಜಿಸಿದರೆ ಆತನು ಮೆಚ್ಚುವನೇ ? ನಂಬಿದವರನ್ನು ಕೈಬಿಟ್ಟು ಅನಾಥರನ್ನಾಗಿ ಮಾಡಿದರೆ ಪುಣ್ಯವು ಬರುವುದೇ ? ಪರಮೇಶ್ವರನು ವಿಶಾಲವಾದ ರಾಜಮಾರ್ಗವನ್ನು ನಿನಗೆ ತೋರಿಸಿರುವಲ್ಲಿ ಅಡ್ಡದಾರಿಯಲ್ಲಿ ಏತಕ್ಕೆ ಹೋಗಬೇಕು ? ಸಂಸಾರದಲ್ಲಿದ್ದರೂ ಕಮಲಪತ್ರದ ಮೇಲಣ ಜಲಬಿಂದುವಿನಂತೆ ಸುಖದುಃಖಗಳಿಗೆ ಅಂಟಿ ಅಂಟದೆ, ಪುಣ್ಯಾತ್ಮರಾದ ಅಂಬರೀಷ, ಜನಕ, ಧರ್ಮರಾಜಾದಿಗಳಂತೆ ರಾಜರ್ಷಿಯಾಗು ; ಅದರಲ್ಲಿ ನಿನಗೆ ಇಹಲೋಕದ ಕೀರ್ತಿಯೂ ಪರಲೋಕದ ಸುಖವೂ ಲಭಿಸಲು ಸಾಧನವಿದೆ. ಆದ ಕಾರಣ ಸಂಸಾರ ಧರ್ಮವನ್ನು ಬಿಡದೆ ಅಂತರಂಗ ಭಕ್ತಿಯಿಂದ ಪುರುಷಾರ್ಥಗಳನ್ನು ಸಾಧಿಸಿ ದೈವಕೃಪೆಗೆ ಪಾತ್ರನಾಗು.

**ಜಿಜಾಬಾಯಿ**—ಮಹಾರಾಜಾ, ನೋಡಿ, ಇವರು ನಿಮಗೆ ಮಾತ್ರ ಇಂತಹ ಉಪದೇಶವನ್ನು ಮಾಡುವರು. ತಾವು ಮಾತ್ರ ನಮ್ಮ ಗೋಳನ್ನೇ ಹುಯಿದುಕೊಂಡು ದೊಡ್ಡ ಪುರುಷಾರ್ಥವನ್ನು ಸಾಧಿಸುತ್ತಿರುವರು. "ಆಡುವುದು ಒಳ್ಳೆಯ ಮಾತು, ಅರೆಯುವುದು ಮೆಣಸಿನಕಾಯಿ."

**ತುಕಾರಾಮ**—ಮಹಾರಾಜಾ, ಭಕ್ತಿಗೆ ವಶನಾಗಿ ನೀನು ನಿನ್ನ ಸ್ವಭಾವ ಧರ್ಮವನ್ನೇ ಮರೆತುಬಿಟ್ಟಿರುವೆ. ನೀನು ಆಚರಿಸಬೇಕಾದ ಧರ್ಮದ ಸ್ವರೂಪವನ್ನು ನಾನು ಕ್ರಮವಾಗಿ ನಿನಗೆ ತೋರಿಸುವೆನು. ಈಗ ಈ ವಿರಕ್ತ ವೇಷವನ್ನು ತ್ಯಜಿಸಿ, ರಾಜಾರ್ಹವಾದ ವಸ್ತ್ರಾಭರಣಗಳನ್ನು ಧರಿಸಿಕೊ. ನಿನ್ನ ಕ್ಷತ್ರಿಯ ಕುಲಧರ್ಮವನ್ನು ಕಾಪಾಡಲು ಪ್ರಯತ್ನಿಸು. ಪಂಡಿತರಾಯರೇ, ವಸ್ತ್ರಾಭರಣಗಳನ್ನು ತರಿಸಿ ಮಹಾರಾಜನಿಗೆ ಧರಿಸಿ.

**ಪಂಡಿತರಾವ್**—ಅಪ್ಪಣೆ. **(ರಾಜನನ್ನು ನೋಡಿ)** ಪ್ರಭೂ, ಹೀಗೆ ದಯಮಾಡಿಸಬೇಕು. **(ಕರೆದುಕೊಂಡು ಹೋಗುವನು.)**

**ಜಿಜಾಬಾಯಿ**—(**ಸಯಿಾಬಾಯಿಯನ್ನು ನೋಡಿ**) ಅಮ್ಮಾ, ತಾಯಿಾ, ನಿಮ್ಮ ಇಷ್ಟವು ನೆರವೇರಿತೋ! ನಿಮ್ಮ ಪತಿಯು ದೊರಕಿದನೋ? ನಮ್ಮ ಮಂಗಳಾದೇವಿಯ ಕುಂಕುಮದ ಮಹಿಮೆಯು ಹೇಗಿರುವುದು ನೋಡಿದಿರೋ?

**ತುಕಾರಾಮ**—(**ಜಿಜಾಬಾಯಿಯನ್ನು ನೋಡಿ**) ಎಲೌ, ಇಲ್ಲಿ ಬಾ, ರಾಜ ದಂಪತಿಗಳು ಅಪ್ರಾರ್ಥಿತರಾಗಿ ನಮ್ಮ ಮನೆಗೆ ಬಂದಿರುವರು; ಏನಾದರೂ ಪ್ರಸಾದವನ್ನು ತಂದುಕೊಡು.

**ಜಿಜಾಬಾಯಿ**—ಸರಿ! 'ತರಗು ತಿನ್ನುವರ ಮನೆಗೆ ಹಪ್ಪಳಕ್ಕೆ ಬಂದರಂತೆ,' ಮನೆಯಲ್ಲೇನಿದೆ? ಮಣ್ಣು! ಏನನ್ನು ತಂದುಕೊಡಲಿ?

**ತುಕಾರಾಮ**—ಎಲೌ! ಹಾಗೆ ದುಡುಕಿ ಮಾತನಾಡಬೇಡ! ಸ್ವಲ್ಪ ಶಾಂತಳಾಗು. ಏನೂ ಇಲ್ಲವಾದರೆ, ಅದೋ ಅಲ್ಲಿ ನೋಡು, ಪಾಂಡುರಂಗನ ಮುಂದೆ ಒಂದು ತೆಂಗಿನಕಾಯಿ ಇದೆ. ಅದನ್ನು ತಂದು ಮಹಾರಾಜ್ಞಿಯವರಿಗೆ ಕೊಡು.

**ಜಿಜಾಬಾಯಿ**—(**ಪಕ್ಕಕ್ಕೆ ಬಂದು**) ಸರಿ! ಸರಿ!! ರಾಣಿಯವರೇನು ಭಿಕ್ಷುಕರೇ; ಸಾಕು ಸುಮ್ಮನಿರಿ. ತೆಂಗಿನಕಾಯಿ ಚಟ್ನಿಗಾಗುವುದು. (**ತೆಗೆದುಕೊಂಡೊಳಗೆ ಹೋಗುತ್ತಿರುವಳು.**)

**ತುಕಾರಾಮ**—(**ಕಾಯನ್ನಾಕೆಯ ಕೈಯಿಂದ ಕಿತ್ತುಕೊಂಡು**) ನೀನು ಹುಚ್ಚಳು. ನಿನಗೆ ಸ್ವಲ್ಪವೂ ಬುದ್ಧಿಯಿಲ್ಲ, ಸುಮ್ಮನಿರು. (**ಕಾಯಿಯನ್ನು ಸಯಿಾಬಾಯಿಯ ಮಡುಲಲ್ಲಿಡುವನು.**)

**ಸಯಿಾಬಾಯಿ**—(**ತುಕಾರಾಮನಿಗೂ ಜಿಜಾಬಾಯಿಗೂ ನಮಸ್ಕರಿಸುವಳು.**)

**ತುಕಾರಾಮ**—ಇನ್ನು ರಾಜನಿಗೆ ಏನು ಪ್ರಸಾದವನ್ನು ಕೊಡೋಣ?

**ಜಿಜಾಬಾಯಿ**—ಆಗಲೇ ಹಾಕಿದ್ದೀರಲ್ಲಾ ಆತನ ಕೊರಳಿಗೆ ಜೋಳಿಗೆಯನ್ನು, ಸದ್ಯಕ್ಕೆ ಅಷ್ಟೇ ಸಾಕು.

**ಶಿವಾಜಿ**—(**ರಾಜಾರ್ಹವಾದ ವಸ್ತ್ರಭೂಷಣಗಳಿಂದಲಂಕೃತನಾಗಿ ಪ್ರವೇಶಿಸುವನು.**)

**ತುಕಾರಾಮ**—ಮಹಾರಾಜಾ, ಇನ್ನು ನಿನ್ನ ಮಾತೆಯ ದರ್ಶನಕ್ಕಾಗಿ ರಾಜಧಾನಿಗೆ ಹೊರಡು. ಕಡೆಯಲ್ಲಿ ನಿನಗೆ ಹೇಳಬೇಕಾದ ವಿಷಯವೊಂದಿರುವುದು.

ಭಾ॥ ಮೇಲೆನಿಪ ನಯ ನೀತಿ ಧರ್ಮದೆ।
ಪಾಲಿಸುತೆ ರಾಜ್ಯವನು ನೀಸನು।
ಕೂಲಭಾವದೊಳ್ಳೆದೆ ವರ್ಣಾಶ್ರಮುವ ರಕ್ಷಿಸುತ॥
ಶೀಲಗುಣ ಸಂಪನ್ನನೆನಿಸಿ ಏ।
ಶಾಲಕೀರ್ತಿಯ ತಳೆದು ಲಕ್ಷ್ಮೀ।
ಲೋಲನೊಲವಿಗೆ ಪಾತ್ರನಾದಪುದುರ್ವರಾಧೀಶ ॥೨೪॥

(ದೇವರ ಮೇಲೆ ಇದ್ದ ಪುಷ್ಪಮಾಲಿಕೆಯನ್ನು ತಂದು ಶಿವಾಜಿಯ ಕೊರಳಿಗೆ ಹಾಕುವನು.)

**ಶಿವಾಜಿ**—ಗುರುಮಹಾರಾಜಾ, ನಿಮ್ಮಾಜ್ಞೆಯನ್ನು ಶಿರಸ್ಸಿನಲ್ಲಿ ಧರಿಸಿರುವೆನು. ಇನ್ನೊಂದಾವೃತ್ತಿ ತಮ್ಮೊಡನೆ ಶ್ರೀ ಪಾಂಡುರಂಗನ ಕೀರ್ತನಮಾಡಬೇಕೆಂದು ನನ್ನ ಅಭಿಲಾಷೆಯಿರುವುದು.

**ತುಕಾರಾಮ**—ಬಹಳ ಸಂತೋಷ. ಎಲ್ಲರೂ ಸೇರಿ ಪಾಂಡುರಂಗನನ್ನು ಭಜಿಸೋಣ. (೩೦) (ಎಲ್ಲರೂ ಭಜನೆಮಾಡುವರು.)

## ದ್ವಿತೀಯಾಂಕಂ ಸಂಪೂರ್ಣಂ.

——:o:——

# ತೃತೀಯಾಂಕಂ

---

## ಸ್ಥಾನ ೧—ತ್ರಿವಿಕ್ರಮಸಾಧುವಿನ ಮಠದ ಮುಂದಣ ಜಗುಲಿ

**(ಮಂಬಾಜಿ, ತ್ರಿವಿಕ್ರಮಸಾಧು ಮತ್ತು ಭೈರವಸ್ವಾಮಿ ಮಾತನಾಡುತ್ತಿರುವರು.)**

**ತ್ರಿವಿಕ್ರಮಸಾಧು**—ಮಂಬಾಜಿ ಸ್ವಾಮಿಗಳೇ, ತಾವು ಹೇಳುವುದೆಲ್ಲವೂ ಸತ್ಯ. ಆ ತುಕ್ಕನ ಪ್ರಾಶಸ್ತ್ಯದಿಂದ ಈಚೀಚೆಗೆ ನಮ್ಮಗಳನ್ನು ಕೇಳುವರೇ ಇಲ್ಲವಾಗಿದೆ. ನಾವುಗಳು ವಯಸ್ಸಿನಲ್ಲಿಯೂ, ವಿದ್ಯೆಯಲ್ಲಿಯೂ ಜ್ಞಾನದಲ್ಲಿಯೂ ಎಷ್ಟೋ ದೊಡ್ಡವರಾಗಿರುವಾಗ, ಈ ಅಲ್ಪ ವಣಿಜನು ಎರಡು ಒಣ ಬುಡುಬುಡಿಕೆಯ ಪದಗಳನ್ನು ಬರೆದುಕೊಂಡು ಬೀದಿ ಬೀದಿಯಲ್ಲಿ ಬಗುಳಿಕೊಂಡು ತಿರುಗುತ್ತಿದ್ದ ಮಾತ್ರಕ್ಕೇ ನಮಗಿಂತಲೂ ಪೂಜ್ಯನಾದನಲ್ಲಾ! ಎಲ್ಲರಲ್ಲಿಯೂ ಅವನಿಗೆ ಅಂತಹ ಪ್ರಾಶಸ್ತ್ಯವೇ! ಅಂತಹ ಪೂಜ್ಯತೆಯೇ! ಜನರಿಗೆ ಇನ್ನೂ ಎಂತಹ ಅಜ್ಞಾನ! ಅವರ ದೃಷ್ಟಿಗೆ ಏನು ಅಂಧಕಾರ!! ಏನು ಕಥೆ! ಚೆನ್ನಾಯಿತು! ಬಹಳ ಚೆನ್ನಾಯಿತು!!

**ಮಂಬಾಜಿ**—ಸರಿ! ಜನಗಳಿಗಂತೆ! ಜನಪತಿಯಾದ ಶಿವಾಜಿ ಮಹಾರಾಜನೇ ಅಂತಹ ಅಂಧಕಾರದಲ್ಲಿ ಸಿಕ್ಕಿ ಆ ಠಕ್ಕನ ಬಲೆಗೆ ಬಿದ್ದಿರುವಾಗ ಇನ್ನು ಸಾಮಾನ್ಯ ಜನರ ಮಾತೇನು! ಅವನಿಗಾಗಿ ವಿಧ ವಿಧ ವಸ್ತು ವಸ್ತ್ರಭೂಷಣಧನಾದಿಗಳನ್ನು ಕಾಣಿಕೆಯಾಗಿ ಕೊಟ್ಟು ತಾನು ಸಹ ದಿವ್ಯ ವೈಭವಯುಕ್ತವಾದ ಅರಮನೆಯನ್ನು ಬಿಟ್ಟು ಆ ತುಕ್ಕನ ಮುರುಕು ಮನೆಗೆ ಹೋಗಿ ಅವನನ್ನು ಸೇವಿಸಿ ಅವನಿಗೆ ಶಿಷ್ಯನಾಗಿ ಹುಚ್ಚು ಹಿಡಿದು ಸಂನ್ಯಾಸಿಯಾಗಿರುವನಂತೆ ಸ್ವಾಮಿ! ಏನು ಹೇಳುವಿರಿ? ಇನ್ನು ಇತರ ಮರುಳುಜನರ ಮಾತೇನು! ತನ್ನ ಬಳಿಗೆ ಅರಿಯದೆ ಯಾರಾದರೂ ಬಂದು ನಮಸ್ಕಾರಮಾಡಿದರೆ ಸಾಕು; ಅವರಿಗೆ ಏನೋ ಮಂಗಮುಲುಕು ಹಾಕಿ ಅವರಿಂದ ಕಾಣಿಕೆಗಳನ್ನು ಕಸಿದುಕೊಂಡು ಅವರನ್ನು ಸಂನ್ಯಾಸಿಗಳನ್ನಾಗಿ ಮಾಡಿಬಿಡುತ್ತಿದ್ದಾ

ನಲ್ಲಾ! ಇವನ ಹಾವಳಿಯಲ್ಲಿ ಸಂಸಾರಿಗಳೆಲ್ಲರೂ ಸಂನ್ಯಾಸಿಗಳಾಗುತ್ತ ಬಂದರೆ ಇನ್ನು ಲೋಕವು ಬಾಳುವುದು ಹೇಗೆ? ಏನು ಕಥೆ! ಇದೆಲ್ಲವನ್ನೂ ಕೇಳುವರೇ ಇಲ್ಲವೇ?

**ಭೈರವ**—ಸರಿ, ನೀವು ಹೇಳಿದಂತೆ ರಾಜ್ಯವಾಳುವ ರಾಜನೇ ಅವನ ಬಲೆಗೆ ಸಿಕ್ಕಿರುವಾಗ ಇನ್ನು ಕೇಳುವರು ಯಾರು ಸ್ವಾಮಿ? ಇಂತಹ ಮೋಸಗಾರರೂ ಲೋಕಕಂಟಕರೂ ದಿನ ದಿನಕ್ಕೆ ಹೆಚ್ಚುತ್ತಿರುವುದರಿಂದಲ್ಲವೇ ಲೋಕದ ಸ್ಥಿತಿಯೇ ವ್ಯತ್ಯಾಸವಾಗುತ್ತಿರುವುದು! ಇನ್ನೂ ಏನೇನಾಗುವುದೋ ಏನು ಕಥೆಯೋ! ದೇವರೇ ಕಾಪಾಡಬೇಕು.

**ಮಂಬಾಜಿ**—ಸರಿ! ದೇವರೇನು ಮಾಡುವನು ಸ್ವಾಮಿ? ಲೋಕೋಪಕಾರಿಗಳಾಗಿಯೂ ಸತ್ಪುರುಷರಾಗಿಯೂ ಇರುವ ನಾವುಗಳು, ಲೋಕವು ಹೀಗೆ ದಿನ ದಿನಕ್ಕೆ ಕೆಡುತ್ತಿದ್ದರೆ ನೋಡುತ್ತ ಸುಮ್ಮನಿರಬಹುದೇ? ಇದಕ್ಕೇನಾದರೂ ಪ್ರತಿಕ್ರಿಯೆಯನ್ನು ಮಾಡಿ ಲೋಕೋದ್ಧಾರ ಮಾಡಿ, ಸಾಧು ಸತ್ಪುರುಷರ ಗೌರವವನ್ನು ಕಾಪಾಡಬೇಕಾದುದೇ ಕರ್ತವ್ಯವು! ಅಲ್ಲವೇ, ತ್ರಿವಿಕ್ರಮ ಸಾಧುಗಳೇ?

**ತ್ರಿವಿಕ್ರಮ**—ಅಹುದಹುದು, ಸಂದೇಹವೇನು! ಒಪ್ಪತಕ್ಕ ಮಾತು!

**ಭೈರವಸ್ವಾಮಿ**—ಇದಕ್ಕೆ ನಾವೇನು ತಾನೇ ಮಾಡಲು ಸಾಧ್ಯ? ಸಾಧು ಮಹಾರಾಜರೇ!

**ತ್ರಿವಿಕ್ರಮ**—ಅದೇ ಈಗ ನಾವು ಆಲೋಚಿಸಬೇಕಾದ ವಿಷಯ! ನನಗೇನೂ ತೋರಲೊಲ್ಲದು! ಮಹಾ ಮೇಧಾವಿಗಳಾದ ನಮ್ಮ ಮಂಬಾಜಿ ಮಹಾರಾಜರೇ ಏನಾದರೂ ಉಪಾಯವನ್ನಾಲೋಚಿಸಬೇಕಾಗಿದೆ.

**ಮಂಬಾಜಿ**—(**ಸಂತೋಷದಿಂದ ಆತ್ಮಗತ**) ಸರಿ, ಇವರು ನನ್ನ ದಾರಿಗೆ ಸರಿಯಾಗಿಯೇ ಬಂದರು!

**ತುಂಬಾಜಿ**—(**ಪ್ರವೇಶಿಸಿ**) ಗುರುಗಳೇ, ಗುರುಗಳೇ, ತಮ್ಮ ಪ್ರಿಯ ಶಿಷ್ಯಳು ಇತ್ತಲೇ ಬರುತ್ತಿರುವಳು.

**ಮಂಬಾಜಿ**—ಯಾರೋ! (**ಮೆಲ್ಲನೆ**) ರಂಭೆಯೇನೋ?

**ತುಂಬಾಜಿ**—ಅಹುದು ಗುರುಗಳೇ, ಬಹುಶಃ ನಿನ್ನೆಯ ದಿನ ಅವಳಾಡಿದ ಮಾತುಗಳಿಂದ ತಮಗೆ ಕೋಪ ಬಂದಿರಬಹುದೆಂದು ಪಶ್ಚಾತ್ತಾಪದಿಂದ ಶರಣಾಗತಳಾಗಲು ಬರುತ್ತಿರಬಹುದೋ ಏನೋ ?

**ಮಂಬಾಜಿ**—(**ಆತ್ಮ**) ಅಯ್ಯೋ ! ನನಗಂತಹ ಪುಣ್ಯವೊದಗುವುದೇ ! ನನ್ನ ರಂಭೆಯು ಮತ್ತೆ ನನ್ನ ವಶಳಾದಾಳೇ ! (**ಪ್ರಕಾಶಂ**) ತುಂಬಾಜೀ, ಅವಳು ಏತಕ್ಕಾದರೂ ಬರುತ್ತಿರಲಿ, ಅಥವಾ ಮತ್ತೆಲ್ಲಿಗಾದರೂ ಹೋಗುತ್ತಿರಲಿ, ಮೆಲ್ಲನೆ ಅವಳನ್ನಿಲ್ಲಿಗೆ ಕರೆತರುವೆಯಾ? ಈ ನಮ್ಮ ಸಾಧು ಮಹಾರಾಜರಿಬ್ಬರಿಗೂ ಅವಳ ರೀತಿಯನ್ನು ಪ್ರತ್ಯಕ್ಷವಾಗಿ ತೋರಿಸಿ ಆ ತುಕ್ಕನ ದುರ್ವರ್ತನವು ಎಷ್ಟು ಪ್ರಬಲವಾಗಿರುವುದೆಂಬುದನ್ನು ವ್ಯಕ್ತಪಡಿಸೋಣ.

**ತುಂಬಾಜಿ**—ಆಗಬಹುದು, ಗುರುಗಳೇ, ಅಪ್ಪಣೆ. (**ಹೋಗುವನು.**)

**ಮಂಬಾಜಿ**—ಸ್ವಾಮಿಾ, ನೋಡಿದಿರಾ ! ನಾನು ಹೇಳಿದ ವಿಷಯಕ್ಕೆ ಪ್ರತ್ಯಕ್ಷ ನಿದರ್ಶನವೇ ಸಂಧಿಸಿತು. ನಮ್ಮ ಪರಮ ಶಿಷ್ಯಳೂ ಮಹಾಭಕ್ತಳೂ ಆದ ಒಬ್ಬ ತರುಣಿಯು ಒಂದು ದಿನ ಆ ತುಕ್ಕನನ್ನು ನೋಡಲು ಹೋದ ಮಾತ್ರಕ್ಕೇ ಅವಳ ಗತಿಯೇನಾಗಿರುವುದೆಂಬುದನ್ನು ತಾವೇ ನೋಡುವಿರಿ.

**ಭೈರವ**—ಹಾಗೆಯೇ ? ಚೆನ್ನಾಯಿತು ! ಏನಾಯಿತು ಅವಳ ಸ್ಥಿತಿ ?

**ಮಂಬಾಜಿ**—ಆಗುವುದೇನು ? ಚಿನ್ನದಂತಹ ಆ ಹೆಣ್ಣಿನ ಸುಖವು ಮಣ್ಣುಪಾಲಾಯಿತು.

**ರಂಭೆ**—(**ಪ್ರವೇಶಿಸುವಳು**) (**೩೧**) (**ತುಂಬಾಜಿ ಬರುವನು.**)

**ಮಂಬಾಜಿ**—(ರಂಭೆಯನ್ನು ತೋರಿಸಿ) ನೋಡಿದಿರಾ ! ನೋಡಿದಿರಾ ! ಇವಳ ರೀತಿಯನ್ನು ನೋಡಿ ನನ್ನ ಹೊಟ್ಟೆಯಲ್ಲಿ ಬೆಂಕಿಬಿದ್ದಂತಾಗಿರುವುದು. ಯಾವ ರೀತಿ ಇದ್ದವಳು ಯಾವ ರೀತಿಯಾದಳು ! ಅಯ್ಯೋ ! ಚಂಡಾಲ ತುಕ್ಕಾ ! ಎಂತಹ ಅನರ್ಥವನ್ನುಂಟುಮಾಡಿದೆ ! ತ್ರಿವಿಕ್ರಮ ಸಾಧುಗಳೇ, ಭೈರವಸ್ವಾಮಿಗಳೇ, ಇವಳ ಪೂರ್ವ ಸ್ಥಿತಿಯನ್ನು ಸ್ಮರಿಸಿಕೊಂಡರೆ ನನಗೆ ತಡೆಯಲಾಗದಷ್ಟು ದುಃಖವು ಉಕ್ಕಿಬರುವುದು.

**ತುಂಬಾಜಿ**—(**ಆತ್ಮಗತ**) ಅಯ್ಯೋ! ಪಾಪ! ಮುಖ್ಯವಾಗಿ ಶಿಷ್ಯಳಿಗೆ ಗುರುಗಳಲ್ಲಿ ಪ್ರೀತಿಯಿಲ್ಲದಿದ್ದರೂ ಗುರುಗಳಿಗೆ ಮಾತ್ರ ಶಿಷ್ಯಳಲ್ಲಿ ಅಂತಹ ಪ್ರೀತಿ! ಇದಲ್ಲವೇ! ಸಾಧು ಲಕ್ಷಣ!

**ಮಂಬಾಜಿ**—ಚಂಡಾಲನು ಅನ್ಯಾಯಮಾಡಿದನು; ಅನರ್ಥವನ್ನೇ ಮಾಡಿದನು. ಮಲ್ಲಿಗೆಯ ಹೂವಿನ ಮೇಲೆ ಮರಳುವ ನೀರನ್ನು ಚೆಲ್ಲಿದನು! ಸಜ್ಜನರ ಸುಖಸಂತೋಷಗಳಿಗೆ ವಿಷವನ್ನೇ ಹಾಕಿದನು. ಸಂಸಾರವನ್ನೇ ಹಾಳುಮಾಡಿದನು!

**ತ್ರಿವಿಕ್ರಮಸಾಧು**—ಮಂಬಾಜಿ ಸಾಧು ಮಹಾರಾಜರೇ! ತಮ್ಮ ಶಿಷ್ಯ ವಾತ್ಸಲ್ಯವು ಅಸಾಧಾರಣವಾದುದು. ಈ ಶಿಷ್ಯಳಿಗಾಗಿ ನೀವು ಇಷ್ಟು ಮರುಗುತ್ತಿರುವುದನ್ನು ನೋಡಿ ನನಗಾಶ್ಚರ್ಯವಾಗುತ್ತಿರುವುದು.

**ಭೈರವ**—ಸಂದೇಹವೇನು! ಇದು ಇವರ ಕೇವಲ ಮೃದು ಮನೋ ಭಾವವನ್ನು ಸೂಚಿಸುವುದು.

**ತುಂಬಾಜಿ**—(**ಆತ್ಮ**) ಮೃದುಮನೋಭಾವವನ್ನೋ! ಮುರಿದ ಮನೋ ಭಾವವನ್ನೋ!

**ಮಂಬಾಜಿ**—ಈಗಲಾದರೂ ಇವಳಿಗೆ ತನ್ನ ಅವಿವೇಕವೂ ಆ ತುಕ್ಕನ ಮೋಸವೂ ಗೋಚರವಾಗಿ ಜ್ಞಾನೋದಯವಾಗಿರಬಹುದು. (**ರಂಭೆಯನ್ನು ನೋಡಿ**) ರಂಭೇ!

**ರಂಭೆ**—ಸ್ವಾಮಿಾ,

**ಮಂಬಾಜಿ**—ನಿನ್ನ ಹುಚ್ಚು ಈಗಲಾದರೂ ಇಳಿಯಿತೋ? ನಿನ್ನ ಅವಿವೇಕವು ನಿನ್ನ ಮನಸ್ಸಿಗೆ ಗೋಚರವಾಯಿತೋ?

**ರಂಭೆ**—ನನ್ನ ಹುಚ್ಚು ಪರಿಪೂರ್ಣವಾಗಿ ಇಳಿದೇ ಹೋಯಿತು. ನನ್ನ ಅವಿವೇಕವು ಚೆನ್ನಾಗಿ ನನ್ನ ಮನಸ್ಸಿಗೆ ಗೋಚರವಾಯಿತು, ಸ್ವಾಮಿಾ.

**ಮಂಬಾಜಿ**—ಏತರಿಂದ ಗೋಚರವಾಯಿತು?

**ರಂಭೆ**—ತಮ್ಮ ಕೃಪೆಯಿಂದ.

**ಮಂಬಾಜಿ**—(**ಸಂತೋಷದಿಂದ**) ಭಲಾ! ಈಗ ನನಗೆ ಸಂತೋಷವಾಯಿತು. ಬಹಳ ಸಂತೋಷವಾಯಿತು. ನೀನು ಎಂತಹ ಮಹಾ ಭಕ್ತೆಯೆಂಬುದನ್ನು ನಾನೀಗ ತಾನೆ ಈ ಸಾಧು ಮಹನೀಯರಲ್ಲಿ ಹೇಳುತ್ತಿದ್ದೆನು.

**ರಂಭೆ**—ಬಹಳ ಸಂತೋಷ! ತಮಗೆ ನನ್ನಲ್ಲಿ ಅಂತಹ ಕೃಪೆಯುಂಟಾದುದಕ್ಕಾಗಿ ನಾನು ಕೃತಜ್ಞಳಾಗಿದ್ದೇನೆ. ನನ್ನನ್ನು ಕರೆಯಿಸಿದ ಕಾರಣವೇನು? ತಿಳಿಸಬೇಕು.

**ಮಂಬಾಜಿ**—ನಿನ್ನ ಗುರುಭಕ್ತಿ ಈಗ ಯಾವ ರೀತಿ ಇರುವುದೆಂಬುದನ್ನು ತಿಳಿಯಲು ನಿನ್ನನ್ನು ಬರಮಾಡಿದೆನು.

**ರಂಭೆ**—ನನ್ನ ಗುರು ಭಕ್ತಿಯು ನಿಶ್ಚಲವಾಗಿರುವುದು. ಈ ಜನ್ಮದಲ್ಲಿಯೂ ಅಥವಾ ಜನ್ಮಾಂತರದಲ್ಲಿಯೂ ಅದು ಚಲಿಸುವಂತಿಲ್ಲ.

**ಮಂಬಾಜಿ**—ಬಹಳ ಸಂತೋಷ!

**ಭೈರವ**—ಇದು ತಾನೇ ಸದ್ಭಕ್ತರ ಲಕ್ಷಣವು.

**ಮಂಬಾಜಿ**—ಹಾಗಾದರೆ, ಆ ಠಕ್ಕನಾದ ನೀಚ ತುಕ್ಕನು ನಿನಗೆ ಮಾಡಿದ ದ್ರೋಹವೆಲ್ಲವನ್ನೂ ಈ ನಮ್ಮ ಸಾಧುಮಹಾರಾಜರ ಮುಂದೆ ವಿವರವಾಗಿ ತಿಳಿಸು.

**ರಂಭೆ**—**(ಕಿವಿಗಳನ್ನು ಮುಚ್ಚಿ)** ಪಾಂಡುರಂಗ! ಪಾಂಡುರಂಗ!! ಸ್ವಾಮಿ, ಪರಮ ಪೂಜ್ಯರಾದ ನಮ್ಮ ಗುರು ಮಹಾರಾಜರನ್ನು ಹೀಗೆ ನನ್ನೆದುರಲ್ಲಿ ದೂಷಿಸಬೇಡಿರೆಂದು ನಾನು ತಮಗೆ ಮೊದಲೇ ವಿಜ್ಞಾಪಿಸಿಕೊಂಡಿರುವೆನು. ಅವರು ಯಾರಿಗೂ ದ್ರೋಹ ಮಾಡತಕ್ಕವರಲ್ಲ. ನನಗೆ ಮಹೋಪಕಾರಮಾಡಿ ನನ್ನನ್ನು ನರಕದಿಂದ ಉದ್ಧರಿಸಿದರು. ಅವರ ದೂಷಣೆಯನ್ನು ನಾನು ಕೇಳಲಾರೆನು. **(ಹೊರಡುವಳು.)**

**ಮಂಬಾಜಿ**—**(ತಡೆದು)** ರಂಭೇ! ರಂಭೇ! ಸ್ವಲ್ಪ ನಿಲ್ಲು; ನಿನ್ನ ಗುರುಭಕ್ತಿಯು ಜನ್ಮ ಜನ್ಮಾಂತರಗಳಲ್ಲಿಯೂ ಚಲಿಸುವಂತಿಲ್ಲವೆಂದು ಹೇಳಿದೆಯಲ್ಲಾ! ಈಗಾಗಲೇ ನನ್ನ ಮಾತಿಗೆ ಪ್ರತಿ ಹೇಳುತ್ತಿರುವೆ! ಇದು ನ್ಯಾಯವೇ? ನಾನು ನಿನಗೆ ಗುರುವಲ್ಲವೇ?

**ರಂಭೆ**—ಅಲ್ಲ! ತಾವು ನನ್ನ ಗುರುವಲ್ಲವೆಂದು ನಾನು ಈ ಮೊದಲೇ ಹೇಳಿಬಿಟ್ಟಿರುವೆನು. ನನ್ನ ಗುರುವು ಪರಮ ಪೂಜ್ಯರಾದ ತುಕಾರಾಮ ಸಾಧುಗಳು.

**ಮಂಬಾಜಿ**—ಹಾಗಾದರೆ, ನಿನ್ನ ಅಜ್ಞಾನವು ತೊಲಗಿತೆಂದು ಹೇಳಿದೆಯಲ್ಲಾ! ಅವಿವೇಕವು ಮನಸ್ಸಿಗೆ ಗೋಚರವಾಯಿತೆಂದು ಹೇಳಿದೆ

ಯಲ್ಲಾ! ಇದೇನೋ ನಿನ್ನ ಸುಜ್ಞಾನವು! ಇದೇನೋ ನಿನ್ನ ವಿವೇಕವು?

**ರಂಭೆ**—ಸ್ವಾಮಿಾ, ತಮ್ಮನ್ನು ನಾನು ಗುರುವೆಂದು ಹೇಳುತ್ತಿದ್ದುದೇ ನನ್ನ ಅಜ್ಞಾನವು. ಅದು ಸಂಪೂರ್ಣವಾಗಿ ತೊಲಗಿಹೋಯಿತು. ಆತ್ಮ ಸುಖವನ್ನು ಮರೆತು ದೇಹ ಸುಖದಲ್ಲಿ ಮನವಿಟ್ಟಿದ್ದುದೇ ಅವಿವೇಕವು. ಅದು ನನ್ನ ಮನಸ್ಸಿಗೆ ಗೋಚರವಾಗಿ ದೇಹಾಭಿಮಾನವನ್ನು ಬಿಟ್ಟೆನು. ನನಗೆ ಮುಕ್ತಿ ಮಾರ್ಗವನ್ನು ಉಪದೇಶಿಸಿದ ಪೂಜ್ಯರಾದ ತುಕಾರಾಮ ಮಹಾರಾಜರೇ ನನ್ನ ಜನ್ಮೋದ್ಧಾರಕ ಗುರುವು. ಅವರಲ್ಲಿ ನನಗಿರುವ ಭಕ್ತಿಯು ನಿಶ್ಚಲವಾದುದು. ಆದುದರಿಂದ ತಾವು ನನ್ನನ್ನು ತಡೆಯಬೇಡಿ. ನಾನವರ ದೂಷಣೆಯನ್ನು ಕೇಳಲೊಲ್ಲೆನು.
**(ಪುನಃ ಹೊರಡುವಳು.)**

**ಮಂಬಾಜಿ**—(**ಮತ್ತೆ ತಡೆದು**) ಏನೇ ರಂಡೇ! ನಾನು ನಯವಾಗಿ ಮಾತನಾಡಿ ಗೌರವಿಸಿದಷ್ಟೂ ಅತಿಯಾಗಿ ಹರಟಿ ಮಹಾತ್ಮರಾದ ನಮ್ಮನ್ನು ದೂಷಿಸಿ, ಆ ದುಷ್ಟ ತುಕ್ಕನನ್ನು ಹೊಗಳಿ ನಮಗವಮಾನಮಾಡುತ್ತಿರುವೆಯಾ! ಭ್ರಷ್ಟೇ! ನೀನು ಧರ್ಮಭ್ರಷ್ಟೆ! ಕರ್ಮಭ್ರಷ್ಟೆ! ಮತಿ ಭ್ರಷ್ಟೆ! ಮಾನ ಭ್ರಷ್ಟೆ! ತನು ಭ್ರಷ್ಟೆ! ಇಂತಹ ಅಯೋಗ್ಯಳೂ ಅಪವಿತ್ರಳೂ ಆದ ದಾಸಿಯು ನಮ್ಮ ವಿಷಯದಲ್ಲಿ ಇಂತಹ ಅಪವಿತ್ರ ವಾಕ್ಯಗಳನ್ನಾಡಿ ಅವಮಾನ ಪಡಿಸುವೆಯಾ?

**ತುಂಬಾಜಿ**—( **ಆತ್ಮ** ) ಜಗಳವಾಡುತ್ತಲಾದರೂ ರಂಭೆಯೆದುರಿಗಿದ್ದರೆ ಸಾಕೆಂದು ಗುರುಗಳು ಅವಳೊಡನೆ ಲೀಲೆಯನ್ನಾಡಲಾರಂಭಿಸಿರುವರು!

**ತ್ರಿವಿಕ್ರಮ ಸಾಧು**—ಎಲೌ ರಂಭೇ! ಪೂಜ್ಯರಾದ ಮಂಬಾಜೀ ಸಾಧುಗಳ ವಿಷಯದಲ್ಲಿ ನೀನು ಅಷ್ಟು ಭಕ್ತಿಯಿಂದಿದ್ದು ಈಗ ಹೀಗೆ ವಿರೋಧವಾಗಿ ಮಾತನಾಡಲೇನು ಕಾರಣ? ಇದರ ಅಂತರ್ಯವೇನು?

**ರಂಭೆ**—ಅಂತರ್ಯವೇನೆಂದು ಹೇಳಲಿ ಸ್ವಾಮಿಾ! ಕೇಳಿ......

**ಮಂಬಾಜಿ**—( **ಆತ್ಮ** ) ಅಯ್ಯೋ! ಈ ರಂಡೆಯು ಹಿಂದು ಮುಂದಣ ವಿಷಯಗಳೆಲ್ಲವನ್ನೂ ಇವರಲ್ಲಿ ಹೇಳಿ ನನ್ನ ಮಾನವನ್ನು ಕಳೆಯು

ವಳೋ ಏನೋ ಕಾಣೆನಲ್ಲಾ! (ಪ್ರಕಾಶಂ) ಎಲವೋ ತುಂಬಾಜೀ, ಇವಳನ್ನು ಇಲ್ಲಿಂದ ಹೊರಗೆ ಕಳುಹಿಸಿಬಿಡೋ! ನಾನಿವಳ ಮುಖವನ್ನು ನೋಡಲಾರೆನು.

**ತುಂಬಾಜಿ**—(**ಆತ್ಮ**) ಇಲ್ಲಿದೆ, ಗುರುಗಳ ಗುಟ್ಟಿನ ಪೆಟ್ಟಿಗೆಯ ಬೀಗದ ಕೈ.

**ಭೈರವ**—ಸ್ವಾಮಿಾ! ಆಗ್ರಹ ಮಾಡಬೇಡಿ– ಸ್ವಲ್ಪ ತಾಳಿ– (**ರಂಭೆಯನ್ನು ನೋಡಿ**) ಎಲೌ, ಇವರಲ್ಲಿ ನೀನು ಮೊದಲು ಹಿತವಾಗಿದ್ದುದೇನು? ಈಗ ಹೀಗೆ ವಿರಸವಾಗಲು ಕಾರಣವೇನು?

**ತುಂಬಾಜಿ**—(**ಆತ್ಮ**) ಮೊದಲು ಸರಸವಾಗಿದ್ದುದೇ ಈ ವಿರಸಕ್ಕೆ ಮೂಲ ಕಾರಣ! ಮತ್ತೇನು!

**ಮಂಬಾಜಿ**—ಸ್ವಾಮಿಾ, ಭೈರವ ಸ್ವಾಮಿಗಳೇ, ಮತ್ತೆ ಮತ್ತೆ ಅವಳನ್ನೇತಕ್ಕೆ ಕೆಣಕಿ ಅವಳಿಂದ ಅವಿವೇಕದ ಮಾತುಗಳನ್ನಾಡಿಸುವಿರಿ? ಅವಳಾಡುವ ಪ್ರತಿಯೊಂದು ಮಾತಿನಲ್ಲಿಯೂ ನಮ್ಮ ದೂಷಣೆ, ತುಕ್ಕನ ಭೂಷಣೆ ತುಂಬಿರುವುದು. ಅಂತಹ ಅಮಂಗಳ ವಾಕ್ಯಗಳನ್ನು ನಾವು ಕೇಳಬೇಕಾದುದೇನು! ಹೋಗಲಿ! ಎಲ್ಲಿಯಾದರೂ ಹಾಳಾಗಿ ಹೋಗಲಿ, ಕಳುಹಿಸಿ ಬಿಡಿ. ಎಲೆ ಭ್ರಷ್ಟೆ, ಹೋಗು! ತೊಲಗಿ ಹೋಗು.

**ತ್ರಿವಿಕ್ರಮ**—ಎಲೌ! ಸ್ವಲ್ಪ ತಾಳು, ಹೀಗೆ ಬಾ! ನಿಮ್ಮ ಗುರುವಿನ ಮನಸ್ಸಿಗೆ ಬೇಸರವನ್ನುಂಟುಮಾಡಬೇಡ! ನಿಮುನಿಮುಗೆ ಇಷ್ಟು ವಿರಸ ಬರಲೇನು ಕಾರಣ? ನನ್ನೊಡನೆ ಹೇಳು.

**ಮಂಬಾಜಿ**—(**ಆತ್ಮ**) ಅಯ್ಯೋ! ಗುಟ್ಟೆಲ್ಲಿ ಬಯಲಾಗುವುದೋ ಕಾಣೆನಲ್ಲಾ! (**ಪ್ರಕಾಶಂ**) ಸ್ವಾಮಿಾ, ತ್ರಿವಿಕ್ರಮ ಸಾಧುಗಳೇ, ಬಿಡಿ, ಆ ಅಯೋಗ್ಯಳ ಯೋಗ್ಯತೆಯೇನು! ತಮ್ಮ ಗೌರವವೇನು! ಆ ರಂಡೆ ಹೇಳುವುದೇನು? ತಾವು ಕೇಳುವುದೇನು? ಅವಳೊಡನೆ ತಮಗೆ ಮಾತೇನು! ಭ್ರಷ್ಟೆ ಏನು ಬೇಕಾದರೂ ಬಗುಳಿಕೊಳ್ಳಲಿ! ಅವಳೊಡನೆ ಇನ್ನು ಸಂಭಾಷಣೆ ಬೇಡ. (**ರಂಭೆಯನ್ನು ನೋಡಿ**) ಎಲೌ! ಇನ್ನು ತುಟಿಯನ್ನು ಬಿಚ್ಚದೆ ಇಲ್ಲಿಂದ ಹೊರಡು, ನಡೆ.

**ರಂಭೆ**—(**ಆತ್ಮ**) ಸದ್ಯಕ್ಕೆ ಬಿಡುಗಡೆಯಾಯಿತು. (**ಹೋಗುವಳು.**)

**ಮಂಬಾಜಿ**—( ತ್ರಿವಿಕ್ರಮ ಸಾಧುವನ್ನೂ ಭೈರವ ಸ್ವಾಮಿಯನ್ನೂ ನೋಡಿ ) ನೋಡಿದಿರೇನು ಸ್ವಾಮಿಾ? ಆ ಠಕ್ಕನ ತಂತ್ರವನ್ನು! ಇಂತಹ ಅಯೋಗ್ಯರಾದ ಅಲ್ಪ ಜನರನ್ನು ತನ್ನ ಪಾಶಕ್ಕೆ ಸಿಕ್ಕಿಸಿಕೊಂಡು ಮರುಳುಮಾಡಿ ನಮಗವಮಾನಮಾಡಿ ಹೊಟ್ಟೆಯುರಿಸುತ್ತಿರುವನು. ಎಷ್ಟೋ ದಿನಗಳಿಂದ ನನ್ನ ಶಿಷ್ಯಳಾಗಿದ್ದ ಇವಳು ಈಗ ನನ್ನನ್ನು ಗುರುವಲ್ಲವೆಂದು ಹೇಳಿ ನನ್ನ ಎದುರಲ್ಲಿಯೇ ಆ ನೀಚನನ್ನು ತನ್ನ ಗುರುವೆಂದು ಹೇಳಿ ಹೊಗಳುತ್ತಿರುವಳಲ್ಲಾ! ಈ ಗಂಡುಬೀರಿಯ ಧೈರ್ಯವೆಷ್ಟರದು! ಅವನು ಇವಳಿಗೆ ಇನ್ನೆಂತಹ ಹುಚ್ಚನ್ನು ಹಿಡಿಸಿರುವನು!

**ಭೈರವ**—ನಿಜ, ಸ್ವಾಮಿಾ, ಕಾಲವು ಕೆಟ್ಟುಹೋಯಿತು. ಅಲ್ಪರ ಪ್ರಾಶಸ್ತ್ಯವು ಹೆಚ್ಚಿತು.

**ಮಂಬಾಜಿ**—ಉಳಿದ ವಿಷಯಗಳೆಲ್ಲವೂ ಹಾಗಿರಲಿ. ಮಹಾ ಭಕ್ತೆಯೂ ಜ್ಞಾನಿಯೂ ಎಂದು ಹೇಳಿಕೊಳ್ಳುವ ಈ ರಂಡೆಯು ನನ್ನನ್ನು ಒಂದು ವೇಳೆ ಉದಾಸೀನ ಮಾಡಿದರೂ, ಸಾಕ್ಷಾತ್ ತ್ರಿವಿಕ್ರಮಮೂರ್ತಿಯಂತಿರುವ ತಮಗಾಗಲಿ ಪರಶಿವಮೂರ್ತಿಯಂತಿರುವ ಇವರಿಗಾಗಲಿ ನಮಸ್ಕರಿಸಿದಳೇ? ನಮ್ರತೆಯನ್ನು ತೋರಿಸಿದಳೇ? ಅವಳಿಗಿನ್ನೆಂತಹ ದುರಹಂಕಾರವೂ ನಮ್ಮಂತಹ ಸಾಧುಗಳನ್ನು ಕಂಡರೆ ತಿರಸ್ಕಾರವೂ ಇರಬಹುದೆಂಬುದು ಈಗಲಾದರೂ ತಮಗೆ ಗೋಚರವಾಯಿತೇ? ಇವೆಲ್ಲವೂ ಯಾವುದರ ಮಹಿಮೆ? ಆ ತುಕ್ಕನ ಉಪದೇಶದ ಮಹಿಮೆ! ಅವನಿರುವವರೆಗೂ ನಮಗೆ ಗೌರವವಿಲ್ಲ. ಸಾಧುಗಳಿಗೆ ಪೂಜ್ಯತೆಯಿಲ್ಲ. ಲೋಕಕ್ಕೆ ಸುಖವಿಲ್ಲ.

**ಭೈರವ**—ನಿಜ! ನಿಜ! ಒಪ್ಪತಕ್ಕುದು! ಒಪ್ಪತಕ್ಕುದು!

**ತ್ರಿವಿಕ್ರಮ**—ಹಾಗಾದರೆ! ಈಗ ನಿಮ್ಮಾಲೋಚನೆಯೇನು?

**ಮಂಬಾಜಿ**—ನನ್ನಾಲೋಚನೆಯನ್ನೇನೆಂದು ಹೇಳಲಿ ಸ್ವಾಮಿಾ! ನಾನೀವರೆಗೂ ಅಂತರ್ಯವನ್ನು ನಿಮಗೆ ತಿಳಿಸಲು ಸಂಕೋಚಪಟ್ಟೆನು. ಆ ನೀಚನು ನನಗೆ ಮಾಡಿರುವ ಅವಮಾನವನ್ನೂ ಅಪಕಾರವನ್ನೂ ಅನರ್ಥವನ್ನೂ ಸ್ಮರಿಸಿಕೊಂಡರೆ ನನ್ನ ಉದರದಲ್ಲಿ ಬಡಬಾಗ್ನಿ ಜ್ವಾಲೆ

ಗಳೇಳುವವು. ಹಿಂದೆ ಅವನ ಮನೆಗೆ ನಾನು ಹೋಗಿದ್ದಾಗ ಗಂಡ ಹೆಂಡಿರು ಜಗಳವಾಡುವ ನೆಪವನ್ನು ಹೂಡಿ ನನ್ನನ್ನು ವಿಧವಿಧವಾಗಿ ಅವಾಚ್ಯ ವಚನಗಳಿಂದ ಬೊಯ್ದು ಅವಮಾನಪಡಿಸಿದುದಲ್ಲದೆ, ಹಿಡಿದು ಹಗ್ಗದಿಂದ ಕಟ್ಟಿಹಾಕಿಸಲು ಪ್ರಯತ್ನಿಸಿದ್ದನು ಸ್ವಾಮಿ!

**ಭೈರವಸ್ವಾಮಿ**—ಯಾರನ್ನು? ನಿಮ್ಮನ್ನೇ?

**ಮಂಬಾಜಿ**—ಅಹುದು ಸ್ವಾಮಿ, ನನ್ನನ್ನು! ಈ ಮಂಬಾಜಿ ಸಾಧು ಮಹನೀಯನನ್ನು!

**ತ್ರಿವಿಕ್ರಮ**—ಚೆನ್ನಾಯಿತು. ಅನಂತರ?

**ಮಂಬಾಜಿ**—ನಾನು, ಅಲ್ಪ ಜನರನ್ನು ಸರಿಗಟ್ಟಿಕೊಂಡು ಹೋಗುವುದು ನಮ್ಮ ಸಾಧುವೃತ್ತಿಗೆ ತಕ್ಕುದಲ್ಲವೆಂದು, ಕೋಪವೆಲ್ಲವನ್ನೂ ನುಂಗಿ ಶಾಂತನಾಗಿ ಆ ಸ್ಥಳವನ್ನೇ ಬಿಟ್ಟು ಹೊರಟು ಬಂದೆನು.

**ತುಂಬಾಜಿ**—(ಆತ್ಮ) ಹೆದರಿಕೊಂಡೋಡಿ ಬಂದೆನೆಂದರೆ ಅವಮಾನ!

**ಭೈರವ**—ಆ ನೀಚನು! ತಮ್ಮ ವಿಷಯದಲ್ಲಿ ಇಷ್ಟು ದುರ್ಮಾರ್ಗದಿಂದ ವರ್ತಿಸಿದನೇ?

**ಮಂಬಾಜಿ**—ಸರಿ! ಇದು ಯಾವ ದೊಡ್ಡ ವಿಚಾರ ಸ್ವಾಮಿ! ಈಚೆಗೆ ಅವನು ನಡೆಯಿಸಿರುವ ಅನರ್ಥವನ್ನು ನಿಮ್ಮಂಥವರು ನೋಡಿದ್ದರೆ ಅವನನ್ನು ಏಕಾಪೋಶನ ಹಾಕಿಕೊಳ್ಳುತ್ತಿದ್ದಿರಿ.

**ತುಂಬಾಜಿ**—(ಆತ್ಮ) ಅದು ಇವರ ಕೈಯಲ್ಲಾಗದು.

**ತ್ರಿವಿಕ್ರಮ**—ಚೆನ್ನಾಯಿತು! ವಿವರಿಸಿ ಹೇಳಿ ಸ್ವಾಮಿ, ಕೇಳುವ!

**ಮಂಬಾಜಿ**—ಕೇಳಿ, ಈಚೆಗೆ ಒಂದಾನೊಂದು ದಿನ, ನಮ್ಮ ಮಹಿಮೆಯನ್ನೂ ಕೀರ್ತಿಯನ್ನೂ ಜನಜನಿತ ವಾರ್ತೆಗಳಿಂದ ಕೇಳಿ ಶಿವಾಜಿ ಮಹಾರಾಜನು, ನಮ್ಮಲ್ಲಿ ಪರಮ ಭಕ್ತಿ ವಿಶ್ವಾಸಗಳನ್ನಿಟ್ಟು ನಮಗಾಗಿ ತನ್ನ ಕಡೆಯ ಅಧಿಕಾರಿಗಳ ಸಂಗಡ ಅಮೋಘವಾದ ರತ್ನಾಭರಣಗಳನ್ನೂ ದಿವ್ಯಾಂಬರಗಳನ್ನೂ ಧನವನ್ನೂ ಬಹಳ ಗೌರವದಿಂದ ಕಾಣಿಕೆಯಾಗಿ ಕಳುಹಿಸಿಕೊಟ್ಟನು.

**ತುಂಬಾಜಿ**—ಅಹುದು, ಸ್ವಾಮಿಾ, ಎಂತೆಂತಹ ಆಭರಣಗಳು! ಎಷ್ಟು ಸುವರ್ಣ ನಾಣ್ಯಗಳು!

**ಮುಂಬಾಜಿ**—ಅದೋ! ಕೇಳಿ, ನಮ್ಮ ಶಿಷ್ಯನೂ ಬಲ್ಲನು.

**ಭೈರವ**—ಸರಿ, ಅನಂತರ?

**ಮುಂಬಾಜಿ**—"ನಾವು ವೈರಾಗ್ಯಶಾಲಿಗಳು, ಇವುಗಳೆಲ್ಲವೂ ನಮಗೇ ತಕ್ಕೆ? ಬೇಡ" ವೆಂದು ನಾವು ಅವುಗಳನ್ನು ನಿರಾಕರಿಸಿದರೂ ಅವರು ಬಹಳವಾಗಿ ಪ್ರಾರ್ಥಿಸಿ ಪರಿಗ್ರಹಿಸಲೇ ಬೇಕೆಂದು ಸಮರ್ಪಿಸಿ ಹೋದರು.

**ತ್ರಿವಿಕ್ರಮ**—ಆಯಿತು, ಆಮೇಲೆ?

**ಮುಂಬಾಜಿ**—ನಾವು ಪ್ರಸಾದವನ್ನು ಕೊಟ್ಟು ಪ್ರೀತಿಯಿಂದಾಶೀರ್ವದಿಸಿ ಅವರನ್ನು ಕಳುಹಿಸಿ ಕೊಟ್ಟೆವು. ಅವರೂ ಸಹ ನಮ್ಮ ತೀವ್ರ ವೈರಾಗ್ಯವನ್ನೂ ನಮ್ಮ ಮಠದಲ್ಲಿ ನಡೆಯುತ್ತಿರುವ ದೇವತಾ ರಾಧನೆಯ ಕ್ರಮವನ್ನೂ ನೋಡಿ ಬಹಳ ಸಂತೋಷಪಟ್ಟುಕೊಂಡೇ ಹೋದರು. ಆದರೆ ಅವರು ಅಲ್ಲಿಂದ ಈ ತುಕ್ಕನ ಬಳಿಗೂ ಹೋಗು ವುದಾಗಿ ನಮ್ಮೊಡನೆ ಹೇಳಿದರು. ಎಲ್ಲಿಯಾದರೂ ಹೋಗಲಿ, ಎಂದು ನಾವು ಸುಮ್ಮನಿದ್ದರೆ, ಆ ವಂಚಕನು, ನೀಚನು, ದ್ರೋಹಿಯು ಎಂತಹ ಕೆಲಸವನ್ನು ಸ್ವಾಮಿಾ ಮಾಡುವುದು?

**ಭೈರವ**—ಏನು ಮಾಡಿದನೋ?

**ಮುಂಬಾಜಿ**—ಏನೆಂದು ಹೇಳಲಿ! ಅವನ ಬಳಿಗೆ ಆ ಅಧಿಕಾರಿಗಳು ಹೋಗಿ ನಮ್ಮ ಮಠದ ವೈಭವವನ್ನು ಹೊಗಳಿ ಸಂತೋಷಪಟ್ಟರೆ, ಆ ಠಕ್ಕನು ಅಸೂಯೆಯಿಂದ ಹೊಟ್ಟೆ ಬಿರಿದು, ನಮ್ಮನ್ನು ಕಪಟ ಸಾಧುಗಳೆಂತಲೂ, ಲೋಕ ವಂಚಕರೆಂತಲೂ, ದುರಾಚಾರಿಗಳೆಂತಲೂ, ರಾಜ ದ್ರೋಹಿಗಳೆಂತಲೂ, ವಿಧ ವಿಧವಾಗಿ ದೂರಿ, ಅವರ ಮನಸ್ಸನ್ನೇ ಪಲ್ಲಟಮಾಡಿ, ಅವರ ಬುದ್ಧಿಗೆ ಇಲ್ಲದ ದುರಭಿಪ್ರಾಯಗಳನ್ನು ತುಂಬಿ, ಅವರನ್ನು ಮುಹಮ್ಮದೀಯರ ವೇಷದಿಂದ ಮತ್ತೆ ನಮ್ಮ ಮಠಕ್ಕೆ ಕಳುಹಿಸಿದನು.

**ತ್ರಿವಿಕ್ರಮ**—ಚೆನ್ನಾಯಿತು! ಅವರು ಬಂದು ಏನು ಮಾಡಿದರು?

**ತುಂಬಾಜಿ**—ಪೂಜಿ.

**ಮಂಬಾಜಿ**—ಅಯ್ಯೋ! ಅದನ್ನು ಸ್ಮರಿಸಿಕೊಂಡರೆ, ಭಯವೂ, ದುಃಖವೂ ಆ ನೀಚನನ್ನು ಸುಟ್ಟುಬಿಡುವಷ್ಟು ಕೋಪಾಗ್ನಿಯೂ ಉಕ್ಕಿ ಬಂದು ನನ್ನನ್ನೇ ಸುಡಲಾರಂಭಿಸುವವು. ಅವರು ಮಹಮ್ಮದೀಯ ವೇಷದಿಂದ ಬಂದು ನಮಗೆ ಕೊಟ್ಟಿದ್ದ ವಸ್ತು ವಸ್ತ್ರ ಭೂಷಣಾದಿಗಳೆಲ್ಲವನ್ನೂ ಕಿತ್ತುಕೊಂಡು, ನಮ್ಮನ್ನು ಹಿಡಿದು ಹೊಡೆದು, ಹಗ್ಗಗಳಿಂದ ಕಟ್ಟಿ ಉರುಳಿಸಿ, ನಮ್ಮನ್ನು ಅಪರಾಧಿಗಳೂ ರಾಜದ್ರೋಹಿಗಳೂ ಎಂದು ರಾಜಾಸ್ಥಾನಕ್ಕೆ ಸೆಳೆದೊಯ್ಯುವುದರಲ್ಲಿದ್ದರು.

**ಭೈರವ**—ಚೆನ್ನಾಯಿತು! ಆಮೇಲೆ? ಆಮೇಲೆ?

**ಮಂಬಾಜಿ**—ಆಗ ನಾನು, ಧನವು ಹೋಗಲಿ, ಪ್ರಾಣವೇ ಹೋಗಲಿ ಮಾನವು ಹೋಗಬಾರದೆಂದು ಆ ಅಧಿಕಾರಿಗಳನ್ನು ಕೇಳಿಕೊಂಡು ನನ್ನ ನಿಸ್ಪೃಹತ್ವವನ್ನು ವ್ಯಕ್ತಪಡಿಸಿದಮೇಲೆ ಅವರು ನಮ್ಮನ್ನು ಪ್ರಾಣದಿಂದ ಬಿಟ್ಟು ಹೋದರು. ಅಯ್ಯೋ! ಅವರು ನಮ್ಮನ್ನು ಹೊಡೆದ ಪ್ರಹರಗಳಿಂದ ನನ್ನ ಮೈಯೆಲ್ಲವೂ ಜಜ್ಜಿ ಕೀಲುಗಳೆ ಮುರಿದು ಬೀಳುವಂತಾಯಿತು. ಸ್ವಾಮಿಾ! ಇಂತಹ ದುರ್ಮಾರ್ಗಿಯಾದ ಆ ಠಕ್ಕನಿಂದ ಇನ್ನೂ ಯಾರು ಯಾರಿಗೆ ಏನೇನು ಗತಿಯಾಗಬೇಕೋ! ಏನೋ! ಆ ದಿನ ನನಗಾಯಿತು, ನಾಳೆ ನಿಮಗಾಗುವುದು ಇದಕ್ಕಿಂತಲೂ ಅಧಿಕವಾದ ಮರ್ಯಾದೆ! ಇದರಿಂದ ಮುಂದೆ ನಾವೇನ ಮಾಡಬೇಕೆಂಬುದನ್ನು ಈ ವರೆಗೆ ನಡೆದಿರುವ ವಿಷಯಗಳಿಂದ ನೀವೇ ಆಲೋಚಿಸಬಹುದು.

**ಭೈರವ**—ಚೆನ್ನಾಯಿತಲ್ಲಾ! ಅವನ ದುರ್ವರ್ತನಕ್ಕೆ ಶಿಕ್ಷೆ ಮಾಡದೆ ಬಿಡುವುದಾದರೆ ಹಾವನ್ನು ಹಾಸಿಗೆಯಲ್ಲಿ ಮಲಗಿಸಿಕೊಂಡಂತೆಯೇ

**ಮಂಬಾಜಿ**—ನಾನೂ ಅದನ್ನೇ ಹೇಳುತ್ತಿರುವುದು.

**ತ್ರಿವಿಕ್ರಮ**—ನ್ಯಾಯ! ನಿಮ್ಮಂತಹ ಸಾಧುಗಳಿಗೆ ಇಷ್ಟು ದ್ರೋಹ ಮಾಡಿದ ಅವನಿಗೆ ಪ್ರಬಲ ಶಿಕ್ಷೆಯೇ ಆಗಬೇಕು.

**ಮಂಬಾಜಿ**—ನಾನಿನ್ನೆಷ್ಟು ಸಹಿಸಲಿ ಸ್ವಾಮಿಾ! ಹೆಂಡತಿಯಿಂದ ಬೊಯ್ಸಿ ಅವಮಾನ ಮಾಡಿದ; ಕಟ್ಟಿಹಾಕಿಸಲು ಯತ್ನಿಸಿದ; ಕಾಸಿಗೆ ತಕವಲ್ಲ

ಸೂಳೆಯಿಂದ ನನ್ನ ಮಾನವನ್ನು ಕಳೆಯಿಸಿದ; ರಾಜಾಧಿಕಾರಿಗಳಿಂದ ನಿರಪರಾಧಿಯಾದ ನನಗೆ ಪ್ರಬಲ ಶಿಕ್ಷೆ ಮಾಡಿಸಿ ಅವಮಾನ ಪಡಿಸಿದ; ಇನ್ನು ಇವನಭ್ಯುದಯದಲ್ಲಿ ನಮಗೆ ಉಳಿಗಾಲವುಂಟೇ ಸ್ವಾಮಿ?

**ತ್ರಿವಿಕ್ರಮ**—ಇಲ್ಲ! ಇಲ್ಲ! ಎಂದಿಗೂ ಇಲ್ಲ! ಅಂದರೆ, ಅವನು ರಾಜಾಧಿಕಾರಿಗಳಿಂದ ನಿಮಗೆ ಮಾಡಿಸಿದ ಶಿಕ್ಷೆಯನ್ನೇ ಈಗ ಅವನಿಗೂ ಮಾಡಿಸಬೇಕೆಂದಂತಾಯಿತು! ಅಲ್ಲವೇ?

**ಭೈರವ**—ಅಷ್ಟೇ ಸಾಲದು; ಅದಕ್ಕೂ ಅಧಿಕವಾದ ಶಿಕ್ಷೆಯನ್ನೇ ಮಾಡಬೇಕು.

**ತ್ರಿವಿಕ್ರಮ**—ಅದಕ್ಕೂ ಅಧಿಕವಾದ ಶಿಕ್ಷೆಯೆಂದರೆ ಎಂತಹ ಶಿಕ್ಷೆ?

**ಭೈರವ**—ಮುಖ್ಯವಾಗಿ ನಮ್ಮ ಪೂಜ್ಯರಾದ ಮಂಬಾಜಿ ಸಾಧು ಮಹಾರಾಜರು ಹೇಳಿದಂತೆ, ಅವನು ಜನರನ್ನು ತನ್ನ ವಶಪಡಿಸಿಕೊಂಡು, ಸಾಧುಗಳ ಪ್ರಾಶಸ್ತ್ಯಕ್ಕೆ ಕುಂದನ್ನು ತಂದಿರುವನೆಂಬುದು ನಿಜ. ಜನರು ಇವನ ಬಲೆಗೆ ಬೀಳುವುದಕ್ಕೆ ಇವನು ಬರೆದುಕೊಂಡು ಬಗುಳಿಕೊಳ್ಳುತ್ತಿರುವ ಅಭಂಗಗಳೆಂಬ ಆ ಹರುಕು ಮುರುಕು ಪದಗಳೇ ಕಾರಣ. ಯಾರನ್ನು ನೋಡಿದರೂ ಅವನ ಅಭಂಗ ಪದಗಳನ್ನು ಹಾಡುವುದು, ಅವನನ್ನು ಗುರುವೆಂದು ನಮಸ್ಕರಿಸಿ ಅವನೊಡನೆ ಭಜನೆ ಮಾಡುವುದು, ಹೀಗಾಗಿದೆ. ಆದುದರಿಂದ ಅವನನ್ನೂ ಅವನ ಅಭಂಗಗಳನ್ನೂ ಭಂಗಪಡಿಸಿ ನಿರುಪಾಧಿಕ ಮಾಡಿಕೊಳ್ಳಬೇಕಾದುದೇ ಕರ್ತವ್ಯವೆಂದು ನನಗೆ ತೋರುವುದು.

**ಮಂಬಾಜಿ**—ಆಹಾ! ಧರ್ಮಶೀಲರೂ ಸಾಧು ಪಕ್ಷಪಾತಿಗಳೂ ಎಂದರೆ ತಾವು ಸ್ವಾಮಿ. ನನಗೀಗ ಬಹಳ ಸಂತೋಷವಾಯಿತು. ತ್ರಿವಿಕ್ರಮ ಸಾಧುಗಳೇ, ಇದಕ್ಕೆ ತಮ್ಮ ಅಭಿಮತವೇನು?

**ತ್ರಿವಿಕ್ರಮ**—ಇನ್ನು ಅವನಿಂದ ನಮಗೂ ಯಾವಾಗ ಏನು ಅಪಾಯವೊದಗುವುದೋ ಎಂಬ ಸಂದೇಹವಿರಲೇ ಇರುವುದು. ದುಷ್ಟ ಶಿಕ್ಷಣ ಶಿಷ್ಟ ಪರಿಪಾಲನಗಳು ಅವಶ್ಯ ಧರ್ಮಗಳಾದುದರಿಂದ ನನಗೂ ಈ ವಿಚಾರದಲ್ಲಿ ಸಂಪೂರ್ಣ ಸಮ್ಮತಿ.

**ಮಂಬಾಜಿ**—ಆಹಾ! ಸತ್ಪುರುಷರ ಚಿತ್ತವೃತ್ತಿಯೆಲ್ಲವೂ ಒಂದೇ ವಿಧವಲ್ಲವೇ!

**ತುಂಬಾಜಿ—(ಆತ್ಮಗತ)** ಅಯ್ಯೋ! ತಾವು ದುರ್ಮಾರ್ಗಿಗಳಾಗಿ ನಿರಪರಾಧಿಯಾದ ಆ ತುಕಾರಾಮರನ್ನು ಶಿಕ್ಷಿಸಲು ಆಲೋಚಿಸುತ್ತಿರುವರಲ್ಲಾ! ಈಗ ನಾನು ಸುಮ್ಮನಿರಲಾಗದು. ಇವರ ಒಳಹೊಕ್ಕು ಇವರಿಗೆ ತಕ್ಕುದನ್ನು ಮಾಡಿ ಬುದ್ಧಿಗಲಿಸಲೇ ಬೇಕು. ಆಗಲಿ!

**ಭೈರವ**—ಸ್ವಾಮಿಾ, ನನಗೊಂದು ಆಲೋಚನೆಯು ತೋರುವುದು. ಏನೆನ್ನುವಿರೋ? ನಾಳೆಯು ದಿನ ಏಕಾದಶೀ ಪುಣ್ಯದಿನ. ನಾವುಗಳು ಪ್ರಾತಃಕಾಲ ವಿಠಲ ದೇವಸ್ಥಾನಕ್ಕೆ ಹೋಗೋಣ; ಅಲ್ಲಿ ಆ ತುಕ್ಕನು ಸಂಧಿಸುವನು. ಆಗ ನಾವು ಅವನನ್ನು ವಿನಯವಾಗಿ ಮಾತನಾಡಿಸಿ, "ಸಾಧು ಮಹನೀಯರೇ, ರಘುರಾಮನು ಲಂಕೆಗೆ ಸೇತುವೆಯನ್ನು ಕಟ್ಟಿದನು. ಅದು ಸಮುದ್ರದ ಭಂಗಗಳಿಂದ ಭಂಗವಾಗಿಯೇ ಹೋಯಿತು; ತಾವು ತುಕಾರಾಮರು; ಮುಕ್ತಿ ಮಂಟಪಕ್ಕೆ ಅಭಂಗದ ಸೇತುವೆಯನ್ನು ಕಟ್ಟಿರುವಿರಿ. ಆದುದರಿಂದ ರಘುರಾಮನ ಶಕ್ತಿಗಿಂತಲೂ ತುಕಾರಾಮರಾದ ತಮ್ಮ ಶಕ್ತಿಯು ಅಧಿಕವಾದುದು. ತಾವು ವೇದಗಳನ್ನು ಭಾಷಾಂತರಿಸಿರುವ ಸಾಕ್ಷಾದ್ವೇದವ್ಯಾಸರು. ಲೋಕದ ಅಜ್ಞಾನವನ್ನು ಕಳೆಯುವ ಜ್ಞಾನ ಪ್ರಭಾಕರರು," ಎಂದು ಮೊದಲಾಗಿ ಬಹಳವಾಗಿ ಹೊಗಳಿ, "ಈ ದಿನ ಶಾಂತ ನಿಶೀಥ ಸಮಯದಲ್ಲಿ ಇಂದ್ರಾಣೀ ನದೀ ತೀರದಲ್ಲಿರುವ ಶಿಲಾ ಮಂಟಪದಲ್ಲಿ ತಾವು ನಮಗೆ ತಮ್ಮ ವೇದಾರ್ಥ ಪ್ರತಿಪಾದಕಗಳಾದ ಅಭಂಗಗಳನ್ನು ತಮ್ಮ ಅಮೃತವಾಣಿಯಿಂದಲೇ ಗಾನಮಾಡಿ, ತತ್ತ್ವಾರ್ಥವನ್ನು ವಿವರಿಸಿ ನಮ್ಮನ್ನು ಧನ್ಯರನ್ನಾಗಿ ಮಾಡಬೇಕು" ಎಂದು ಪ್ರಾರ್ಥಿಸಿ ಆ ರೀತಿ ಮಾಡುವಂತೆ ಒಪ್ಪಿಸಿ ಬರಬೇಕು. ಅಲ್ಲದೆ ಅವನು ತನ್ನ ಗ್ರಂಥಗಳೆಲ್ಲವನ್ನೂ ಅಲ್ಲಿಗೆ ತೆಗೆಯುಸಿಕೊಂಡು ಬರುವಂತೆ ಏರ್ಪಡಿಸಿ, ಅವನು ಬಂದ ಕೂಡಲೇ ಅವನನ್ನು ಹಿಡಿದು ಆ ಗ್ರಂಥಗಳೆಲ್ಲವನ್ನೂ ಇಂದ್ರಾಣಿಯಲ್ಲಿ ಮುಳುಗಿಸಿ, ಅವನಿಗೂ

ತಕ್ಕಂತೆ ದೇಹಶುದ್ಧಿ ಮಾಡಿ ಸಮಯೋಚಿತವಾಗಿ ಮುಂದಿನ ಕಥೆಯನ್ನು ಪೂರಯಿಸಬೇಕು. ಇದಕ್ಕೇನು ಹೇಳುವಿರಿ?

**ಮಂಬಾಜಿ**—ಆಹಾ! ಭೈರವ ಸ್ವಾಮಿಗಳೇ, ತಮ್ಮ ಬುದ್ಧಿ ಚಾತುರ್ಯವು ಅಸಾಧಾರಣವಾದುದು. ಉಪಾಯವು ಬಹು ಸಮಂಜಸವಾಗಿರುವುದು. ಹಾಗೆಯೇ ಮಾಡಬೇಕು. ತುಂಬಾಜೀ;

**ತುಂಬಾಜಿ**—ಗುರುಗಳೇ—(**ಒಳಗೆ ಬರುವನು.**)

**ಮಂಬಾಜಿ**—ಕೇಳಿದೆಯೋ ಭೈರವ ಸ್ವಾಮಿಗಳು ಹೇಳಿದುದನ್ನು?

**ತುಂಬಾಜಿ**—ಕೇಳಿದೆನು, ಗುರುಗಳೇ.

**ಮಂಬಾಜಿ**—ಈ ಕಾರ್ಯ ಸಾಧನೆಗೆ ನಿನ್ನ ಸಾಹಸ ಚಾತುರ್ಯಗಳನ್ನು ಬಹಳವಾಗಿ ಪ್ರಯೋಗಿಸಬೇಕಾಗಿರುವುದು.

**ತುಂಬಾಜಿ**—ಗುರುಗಳೇ! ನಾನು ತಮ್ಮ ಆಜ್ಞಾಬದ್ಧನಲ್ಲವೇ!

**ಮಂಬಾಜಿ**—ನೀನಂತಹ ವಿಧೇಯನೂ ಚತುರನೂ ಎಂಬುದನ್ನು ಬಲ್ಲೆನು. ಕೇಳು, ನಾಳಿನ ರಾತ್ರಿ ಆ ತುಕ್ಕನು ತನ್ನ ಗ್ರಂಥಗಳೊಡನೆ ಇಂದ್ರಾಣೀ ತೀರದ ಮಂಟಪಕ್ಕೆ ಬರುವಾಗ ಆ ಪುಸ್ತಕಗಳನ್ನು ಕಸಿದುಕೊಳ್ಳಬೇಕು.

**ಭೈರವ**—ಪುಸ್ತಕಗಳ ವಿಚಾರವು ನನಗಿರಲಿ! ಅವನಿಗೆ ಮಿಕ್ಕ ವಿಚಾರವನ್ನು ಹೇಳಿ.

**ಮಂಬಾಜಿ**—ಸಂತೋಷ! ಗ್ರಂಥಗಳನ್ನು ಮುಳುಗಿಸುವ ಕಾರ್ಯವು ತಮಗೆ ಒಪ್ಪಿತು. ತುಂಬಾಜೀ, ಇನ್ನು ನೀನು ಆ ತುಕ್ಕನನ್ನು ಚೆನ್ನಾಗಿ ಹೊಡೆದು ಬಲಿಯಿಕ್ಕಬೇಕು. ಒಂದು ವೇಳೆ ಅವನು ಕತ್ತಲಲ್ಲಿ ತಪ್ಪಿಸಿಕೊಳ್ಳಲು ಏನಾದರೂ ತಂತ್ರ ಮಾಡಿದರೂ, ಬೇಡಿಕೊಂಡರೂ, ನಮ್ಮ ಹೆಸರನ್ನು ಹೇಳಿದರೂ ನೀನು ಲಕ್ಷಿಸಕೂಡದು. ನಿನ್ನ ಕಾರ್ಯವನ್ನು ನೀನು ತಡೆಯಿಲ್ಲದೆ ಮಾಡಿಬಿಡಬೇಕು. ಸ್ವಲ್ಪವೂ ಕರುಣೆಯನ್ನು ತೋರಿಸಕೂಡದು. ತಿಳಿಯಿತೋ? ನಿನ್ನ ಕೈಯು ನಿಲ್ಲದೆ ಯಂತ್ರದಂತೆ ಆಡಬೇಕು.

**ತುಂಬಾಜಿ**—ಆಗಲಿ, ಗುರುಗಳೇ; ನೀವೇ ನೋಡುವಿರಿ ನನ್ನ ಕೈಚಳಕವನ್ನು.

**ಮುಂಬಾಜಿ**—ಆಗಲಿ, ನೀನು ನನ್ನ ಕಣ್ಣಿಗೆ ಹಬ್ಬವನ್ನುಂಟುಮಾಡ ಬೇಕು. ( **ಭೈರವನನ್ನು ನೋಡಿ** ) ಸ್ವಾಮಿಾ, ಸಾಧು ಮಹನೀಯರೇ, ನಮ್ಮ ಶಿಷ್ಯನು ನಮಗೆ ಪೂರ್ಣ ಸಹಾಯ ಮಾಡುವನು.

**ತ್ರಿವಿಕ್ರಮ, ಭೈರವ**—ಬಹಳ ಸಂತೋಷ. (**ಹೋಗುವರು.**)

## ದೃಶ್ಯ ೨—ಇಂದ್ರಾಣೀ ನದೀ ತೀರದಲ್ಲಿ ಅಶ್ವತ್ಥದ ಕಟ್ಟೆ

(**ತುಕಾರಾಮನು ಅಭಂಗ ಗ್ರಂಥಗಳ ಗಂಟನ್ನು ತೆಗೆದುಕೊಂಡು ಪ್ರವೇಶಿಸುವನು.**)

**ತುಕಾರಾಮ**—(**೩೨**) ಪೂಜ್ಯರಾದ ಸಾಧು ಮಹನೀಯರು ನನ್ನ ಕೀರ್ತನ ಗಳನ್ನು ಕೇಳಲಪೇಕ್ಷಿಸಿ ನನ್ನನ್ನನುಗ್ರಹಿಸಿದುದರಿಂದ, ನನ್ನ ಕವಿತಾ ಸೇವೆಯು ಪರಮಾತ್ಮನಿಗೆ ನಿಜವಾಗಿಯೂ ಅರ್ಪಿತವಾಗುವುದೆಂಬುದ ರಲ್ಲಿ ಸಂದೇಹವೇ ಇಲ್ಲ. ಇಂತಹ ಏಕಾದಶೀ ಮಹಾ ದಿನದಲ್ಲಿ ಅಂತಹ ಸಾಧು ಸತ್ಪುರುಷರ ಸಂಘದಲ್ಲಿ ಹರಿ ಕೀರ್ತನವನ್ನು ಮಾಡಿ, ಸತ್ಕಾಲ ಕ್ಷೇಪದಿಂದ ಜಾಗರಣೆ ಮಾಡತಕ್ಕ ಸಂಧಿಯೊದಗಿರುವುದು ನನ್ನ ಪುಣ್ಯೋದಯವೇ ಸರಿ. ಇನ್ನೂ ಆ ಮಹನೀಯರು ಇಲ್ಲಿಗೆ ಬಂದಂತೆ ಇಲ್ಲ. ಅವರು ಬರುವವರೆಗೂ ಇಲ್ಲಿಯೇ ಕುಳಿತು ಭಜನೆ ಮಾಡು ತ್ತಿರುವೆನು.

(**ಪುಸ್ತಕಗಳ ಗಂಟನ್ನು ಪಕ್ಕದಲ್ಲಿಟ್ಟುಕೊಂಡು ಭಜನೆ ಮಾಡುತ್ತ (೩೩) ಕುಳಿತು ಧ್ಯಾನ ಲೀನನಾಗುವನು.**)

**ಭೈರವಸಾಧು**—( **ಪ್ರವೇಶಿಸಿ ನೋಡಿ** ) ಅದೋ ! ತುಕಾರಾಮನಾಗಲೇ ಬಂದಿರುವನು ! ಪುಸ್ತಕಗಳ ಗಂಟನ್ನು ಪಕ್ಕದಲ್ಲಿಟ್ಟುಕೊಂಡು ಧ್ಯಾನ ದಲ್ಲಿ ಕುಳಿತಿರುವನು ! ಈಗ ಕತ್ತಲೆ, ಸಮಯವು ಸರಿಯಾಗಿದೆ. ನಾನು ಮೆಲ್ಲನೆ ಹಿಂದಣಿಂದ ಹೋಗಿ ಆ ಗಂಟನ್ನು ಎತ್ತಿಕೊಂಡು ಬಂದು ನದಿಯಲ್ಲಿ ಹಾಕಿಬಿಡುವೆನು.

(**ಹಿಂದಣಿಂದ ಮೆಲ್ಲನೆ ಹೋಗಿ ಗಂಟನ್ನೆತ್ತಿಕೊಂಡು ಹೊರಟು ಹೋಗುವನು.**)

**ಮುಂಬಾಜಿ**—(**ವೇಷಾಂತರದಿಂದ ಜೊತೆಯ ತನ್ನ ನಾಲ್ಕು ಮಂದಿ ಶಿಷ್ಯರೊಡನೆ ಪ್ರವೇಶಿಸಿ**) ಬಾಲಾಜೀ, ಇನ್ನೂ ತ್ರಿಮೂರ್ತಿಗಳಲ್ಲಿ ಯಾರೊಬ್ಬರೂ

ಬಂದಂತೆ ಇಲ್ಲ. ನಾವಿಲ್ಲಿಯೇ ಕಾದಿದ್ದು ಅವರು ಬಂದೊಡನೆಯೇ ಒಬ್ಬೊಬ್ಬರನ್ನಾಗಿ ಚೆನ್ನಾಗಿ ಪ್ರಹರಿಸಿ ತಕ್ಕುದನ್ನು ಮಾಡೋಣ.

**ಬಾಲಾಜಿ**—ಅದು ಸರಿ. ಒಂದು ವೇಳೆ ನಮ್ಮ ಗುರುತು ಅವರಿಗೆ ಸಿಕ್ಕಿದರೋ?

**ತುಂಬಾಜಿ**—ಸಿಕ್ಕಿದರೆ ತಾನೇ ಭಯವೇನು! ಈಗ ಹೇಗಿದ್ದರೂ ಕತ್ತಲೆ. ಅದರಿಂದ ಗುರುತು ಸಿಕ್ಕಿದರೆ ತುಕಾರಾಮನೆಂದು ಭ್ರಾಂತಿಯಿಂದ ಹೊಡೆದೆವೆಂದರಾಯಿತು.

**ಬಾಲಾಜಿ**—ಸರಿ! ಒಳ್ಳೆಯ ಉಪಾಯ. ಅವರ ಆಜ್ಞೆಯನ್ನೇ ನಾವು ನಡೆಯಿಸಿದೆವೆಂದು ತಿಳಿದುಕೊಳ್ಳುವರು.

**ತುಂಬಾಜಿ**—ಅಷ್ಟಲ್ಲದೆ ಮತ್ತೇನು! ಹೀಗೆ ಬನ್ನಿ. ಈ ಪೊದೆಯ ಮರೆಯಲ್ಲಿರೋಣ. (**ಅಡಗುವರು.**)

**ತ್ರಿವಿಕ್ರಮಸಾಧು**—(**ಪ್ರವೇಶಿಸಿ**) ಏನಿದು! ಇನ್ನೂ ಯಾರೂ ಬಂದಂತೆ ಇಲ್ಲವಲ್ಲಾ! ಮಂಬಾಜಿ ಸಾಧುಗಳೇತಕ್ಕೆ ವಿಳಂಬಮಾಡಿದರು?

**ತುಂಬಾಜಿ**—ಬಾಲಾಜೀ, ಇದೋ! ಒಬ್ಬರು ಬಂದರು. ಬಾ, ಹಿಂದಣಿಂದ ಹೋಗಿ ಕಟ್ಟಿ ಬಾರಿಸಿಬಿಡೋಣ. (**ಹಿಂದಣಿಂದ ಬಂದು ತ್ರಿವಿಕ್ರಮನನ್ನು ಕಟ್ಟಿ ಹೊಡೆಯುವರು.**)

**ತ್ರಿವಿಕ್ರಮ**—ಅಯ್ಯೋ! ಅಯ್ಯೋ! ಯಾರದು? ತುಂಬಾಜೀ, ನಾನೋ!

**ತುಂಬಾಜಿ**—ನೀನಾದುದರಿಂದಲೇ ತಕ್ಕುದನ್ನು ಮಾಡುತ್ತಿರುವೆವು. ಲೋಕಪೂಜ್ಯರಾದ ನಮ್ಮ ಗುರು ಮಹಾರಾಜರಿಗೆ ನೀನು ಮಾಡಿದ ಅವಮಾನಕ್ಕೂ ಅಪಕಾರಕ್ಕೂ ನಿನಗೆ ತಕ್ಕ ಶಿಕ್ಷೆಯನ್ನು ಮಾಡಿಯೇ ಬಿಡುವೆವು. ನೀಚಾ, ಅಯೋಗ್ಯಾ. (**ಹೊಡೆಯುವರು.**)

**ತ್ರಿವಿಕ್ರಮ**—ಅಯ್ಯೋ! ಅಯ್ಯೋ! ನಾನೋ ತುಂಬಾಜೀ, ನಿಮ್ಮ ಗುರುಗಳ ಸ್ನೇಹಿತನು, ತ್ರಿವಿಕ್ರಮ ಸಾಧುವು! ತ್ರಿವಿಕ್ರಮ ಸಾಧುವು!

**ತುಂಬಾಜಿ**—ಏನು? ತ್ರಿವಿಕ್ರಮ ಸಾಧುಗಳೇ? ಎಂದಿಗೂ ಅಲ್ಲ. ನೀನು ತುಕ್ಕನು! ತುಕ್ಕನು ಠಕ್ಕನು! ಆ ಮಹಾನುಭಾವರಾದ ನಮ್ಮ ತ್ರಿವಿಕ್ರಮ ಸಾಧುಗಳ ಹೆಸರನ್ನು ಹೇಳಿ ತಪ್ಪಿಸಿಕೊಂಡು ಹೋಗಲು ಸುಳ್ಳನ್ನು ಹೇಳುವೆಯಾ, ದ್ರೋಹೀ! (**ಹೊಡೆದು ಕೆಡಹುವರು.**)

**ಬಾಲಾಜಿ**—ತುಂಬಾಜೀ, ಇವನಿಗೆ ತಕ್ಕುದಾಯಿತು. ಇವನನ್ನು ಆ ಪೊದೆಯ ಮರೆಯಲ್ಲಿಟ್ಟು, ನಾವು ಮುಂದೆ ಹೋಗಿ ಅಡಗಿದ್ದರೆ ಆ ಇಬ್ಬರು ಮಹನೀಯರೂ ಬರುವರು. ಆಗ ಅವರನ್ನೂ ವಿಚಾರಿಸಿ ಕೊಳ್ಳೋಣ.

**ತುಂಬಾಜಿ**—ಹಾಗೆಯೇ ಆಗಲಿ. (**ತ್ರಿವಿಕ್ರಮನನ್ನು ಎತ್ತಿ ಮರೆಯಲ್ಲಿ ಮಲಗಿಸಿ ಹೋಗುವರು.**)

**ಮಂಬಾಜಿ**—(**ಪ್ರವೇಶಿಸಿ ನೋಡಿ**) ಇನ್ನೂ ತುಂಬಾಜಿಯು ಬಂದಂತೆ ಇಲ್ಲ. ಈ ತಕ್ಕನಾಗಲೆ ಇಲ್ಲಿ ಬಂದು ಕುಳಿತಿರುವನು. ತುಂಬಾಜಿ ಯೇತಕ್ಕೆ ಬರಲಿಲ್ಲ! ಅವನು ವಿಳಂಬವಮಾಡತಕ್ಕವನಲ್ಲವಲ್ಲಾ! (**ಆಲೋಚಿಸಿ**) ಅವನಿಗೆ ಕಾಯಬೇಕಾದುದೇನು! ಈ ತುಕ್ಕನು ಕಣ್ಣು ಮುಚ್ಚಿ ಧ್ಯಾನದಲ್ಲಿ ಕುಳಿತಂತಿದೆ. ಈ ಕಲ್ಲನ್ನೆತ್ತಿ ಅವನ ತಲೆಯ ಮೇಲೆ ಹಾಕಿದರಾಯಿತು. ಕಥೆಯು ಪೂರಯಿಸುವುದು. (**ಕಲ್ಲಿನ ಬಳಿಗೆ ಬರುವನು. ಸರ್ಪವು ಮಂಬಾಜಿಯ ಕಾಲನ್ನು ಕಚ್ಚುವುದು.**) ಅಯ್ಯೋ! ಹಾವು ಕಚ್ಚಿತು! ಹಾವು! ಹಾ! (**ಬೀಳುವನು.**)

(**ಜಿಜಾಬಾಯಿ ರಂಭೆ ಸಹ ತುಕಾರಾಮನನ್ನು ಹುಡುಕುತ್ತ ಪ್ರವೇಶಿಸುವರು.**)

**ಜಿಜಾಬಾಯಿ**—ರಂಭೇ! ಎಲ್ಲಿ ಹುಡುಕಿದರೂ ಇಲ್ಲವಲ್ಲಾ! ನಿತ್ಯವೂ ಭಜನೆ ಮಾಡಿಕೊಂಡು ಹೋದವರು ಇಷ್ಟು ಹೊತ್ತಿಗೆ ಎಷ್ಟೋ ಮುಂಚಿತವಾಗಿ ಮನೆಗೆ ಬಂದು ಬಿಡುತ್ತಿದ್ದರು! ಈ ದಿನ ಎಲ್ಲಿ ಕುಳಿತು ಬಿಟ್ಟರೋ! ಅಥವಾ ಏನು ಅಪಾಯಕ್ಕೆ ಸಿಕ್ಕಿಬಿಟ್ಟರೋ ಕಾಣೆನೇ! ಇನ್ನೇನು ಗತಿಯೇ?

**ರಂಭೆ**—ಅಮ್ಮಾ! ಅವರು ಮತ್ತೆಲ್ಲಿಗೆ ಹೋಗಿದ್ದರೂ ಭಯವಿರುತ್ತಿರ ಲಿಲ್ಲ. ಆ ಹಾಳು ಮಂಬಾಜಿ ಮೊದಲಾದವರು ಗುರುಗಳನ್ನು ರಾತ್ರಿ ಯಲ್ಲಿ ಇಲ್ಲಿಗೆ ಬರಮಾಡಿದರೆಂದು ತಿಳಿದುದರಿಂದ ನನ್ನ ಮನಸ್ಸಿಗೆ ಬಹಳ ಭೀತಿಯುಂಟಾಗಿರುವುದು. ಆ ದುಷ್ಟನಿಗೆ ಮೊದಲಿಂದಲೂ ಇವರ ಮೇಲೆ ಅಸೂಯೆ ಇರಲೇ ಇತ್ತು. ನನಗೆ ಮೊದಲೇ ಈ ವಿಚಾರವು ತಿಳಿದಿದ್ದರೆ ಆ ಮಂಬಾಜಿಯ ಸಹವಾಸಕ್ಕೆ ಹೋಗಕೂಡ

ದೆಂದು ನಾನು ಗುರು ಮಹಾರಾಜರ ಪಾದಗಳ ಮೇಲೆ ಬಿದ್ದು ಬೇಡಿ ಕೊಳ್ಳುತ್ತಿದ್ದೆನು. ಆ ನೀಚನೆಂಥವನೆಂಬುದನ್ನು ನೀವು ಕೇಳಿಲ್ಲವೇ?

**ಜಿಜಾಬಾಯಿ**—ಕೇಳಿರುವುದೇಕೆ! ನೋಡಿಯೇ ಇರುವೆನು. ಆದರೂ ನನ್ನ ಬುದ್ಧಿಯೂ ಮಂಕಾಯಿತು. (**ಮುಂದೆ ಬಂದು ಮಂಬಾಜಿ ನರಳುವ ಧ್ವನಿಯನ್ನು ಕೇಳಿ ಆಶ್ಚರ್ಯದಿಂದ**) ಏನಿದು ರಂಭೇ! ಏನೋ ನರಳುವ ಶಬ್ದವು ಕೇಳಿ ಬರುತ್ತಿರುವುದು! ಇನ್ನೇನು ಗತಿ!

**ರಂಭೆ**—(**ಮುಂದೆ ಹೋಗಿ ಧ್ಯಾನಲೀನನಾಗಿದ್ದ ತುಕಾರಾಮನನ್ನು ಕಂಡು ಸಂತೋಷದಿಂದ**) ತಾಯಿ, ಇದೋ, ಗುರು ಮಹಾರಾಜರು ಸುಖವಾಗಿ ಇಲ್ಲಿಯೇ ಧ್ಯಾನದಲ್ಲಿ ಕುಳಿತಿರುವರು.

**ಜಿಜಾಬಾಯಿ**—ಏನು? ಧ್ಯಾನದಲ್ಲಿರುವರೇ? (**ಆತುರದಿಂದ ಮುಂದೆ ಬಂದು ನೋಡಿ ಸಂತೋಷದಿಂದ**) ತಾಯಿ, ಮಂಗಳಾದೇವೀ! ಸದ್ಯಕ್ಕೆ ನಿನ್ನನುಗ್ರಹದಿಂದ ಧನ್ಯರಾದೆವಮ್ಮಾ! (**ದೇವಿಗೆ ಕೈ ಮುಗಿದು, ತುಕಾರಾಮನನ್ನು ಧ್ಯಾನದಿಂದೆಬ್ಬಿಸುತ್ತ**) ಏಳಿ! ಮನೆಗೆ ಹೋಗೋಣ! ಏಳಿ.

**ತುಕಾರಾಮ**—(**ಎಚ್ಚರಗೊಂಡು**) ಎಲೌ! ಇಷ್ಟು ಹೊತ್ತಿನಲ್ಲಿ ನೀನಿಲ್ಲಿಗೇತಕ್ಕೆ ಬಂದೆ? ಏನು ಕಥೆ?

**ಜಿಜಾಬಾಯಿ**—ಏನು ಕಥೆಯೂ ಇಲ್ಲ. ಎಲ್ಲವೂ ನಿಮ್ಮ ಕಥೆಯೇ! ಏಳಿ! ಇಷ್ಟು ಹೊತ್ತಿನಲ್ಲಿ ಒಂಟಿಯಾಗಿ ಬಂದು ಈ ಸ್ಮಶಾನದಲ್ಲಿ ಹೀಗೆ ಕುಳಿತುಬಿಟ್ಟಿರುವಿರಲ್ಲಾ! ಇದೇನು ಹುಚ್ಚು? ನಡೆಯಿರಿ, ಮನೆಗೆ ನಡೆಯಿರಿ, ಸಾಕು.

**ತುಕಾರಾಮ**—ಎಲೌ! ಸಾಧು ಮಹನೀಯರ ಅಪ್ಪಣೆಯಂತೆ ನಾನಿಲ್ಲಿಗೆ ಬಂದು ಅವರ ನಿರೀಕ್ಷಣೆಯಲ್ಲಿರುವೆನು; ನನಗೆ ಇಲ್ಲಿದ್ದರೆ ಯಾವ ಭಯವೂ ಇಲ್ಲ. ನೀನು ಮನೆಗೆ ಹೋಗು. (**ಮತ್ತೆ ಮಂಬಾಜಿಯು ನರಳುವ ಧ್ವನಿಯು ಕೇಳುವುದು.**) ಏನಿದು! ನರಳುವ ಧ್ವನಿಯು?

**ರಂಭೆ**—(**ನೋಡಿ, ಓಡಿ ಬಂದು**) ಅಮ್ಮಾ! ಅಮ್ಮಾ! ಇಲ್ಲಿ ನೋಡಿ, ಮಂಬಾಜಿ ಸಾಧುಗಳು ಹಾವು ಕಚ್ಚಿ ನರಳುತ್ತಿದ್ದಾರೆ!

**ಜಿಜಾಬಾಯಿ**—ಏನು! ಏನು! ಮಂಬಾಜಿಗೆ ಹಾವು ಕಚ್ಚಿತೇ? ಹಾಗೆಯೇ ಆಗಬೇಕು. ಹಾಗೆಯೇ ಆಗಬೇಕು. ಆ ನೀಚನು ನನ್ನ ಪತಿಯನ್ನು

ಕಾಲಿನಿಂದ ಒದೆದಿದ್ದನು. ಆದರಿಂದ ಅವನ ಕಾಲಿಗೆ ಹಾವು ಕಚ್ಚಲೇ ಬೇಕು. ಆಗಲಿ! ಅನುಭವಿಸಲಿ ನೀಚನು!

**ತುಕಾರಾಮ**—(**ಕಾತರನಾಗಿ**) ಏನು! ಏನು? ಮಂಬಾಜಿ ಮಹಾರಾಜರಿಗೆ ಹಾವು ಕಚ್ಚಿತೇ? ಅಯ್ಯೋ! ಪಾಪ! (ಎದ್ದು ಬಂದು) ಎಲ್ಲಿ? ಅವರೆಲ್ಲಿರುವರು?

**ರಂಭೆ**—ಇದೋ! ಈ ಕಡೆ ಮಲಗಿರುವರು. (**ತೋರಿಸುವಳು.**)

**ತುಕಾರಾಮ**—(**ಮಂಬಾಜಿಯ ಬಳಿಗೆ ಬಂದು**) ಸ್ವಾಮಿಾ! ಸಾಧು ಮಹಾರಾಜರೇ! ಹಾವು ಎಲ್ಲಿಗೆ ಕಚ್ಚಿತು? ಅಯ್ಯೋ! ಪಾಪ. (**ಕಾಲನ್ನು ನೋಡಿ ಹಿಡಿದುಕೊಳ್ಳುವನು.**)

**ಜಿಜಾಬಾಯಿ**—(**ಕೈಯನ್ನು ಕಿತ್ತುಹಾಕಿ**) ಬೇಡಿ! ಮುಟ್ಟಬೇಡಿ ಆ ನೀಚನ ಕಾಲನ್ನು!

**ತುಕಾರಾಮ**—ಎಲೌ, ಸುಮ್ಮನಿರು. ಸಾಧು ಸತ್ಪುರುಷರ ಪಾದ ಸ್ಪರ್ಶನವು ಪಾಪ ನಿವಾರಕವು, ಪುಣ್ಯ ಫಲಪ್ರದವು. ಪ್ರಾಣಿ ಮಾತ್ರಕ್ಕೆ ದಯೆಯನ್ನು ತೋರಿಸ ಬೇಕಾದುದೇ ನಮ್ಮ ಕರ್ತವ್ಯವು. ಆದರಲ್ಲಿ ಇಂತಹ ಪುಣ್ಯಶೀಲರ ಸೇವೆಯೊದಗಿದುದು ನನ್ನ ಪುಣ್ಯೋದಯವು. (**ಕೈಕಾಲುಗಳನ್ನು ಕಡವಿ ಎಬ್ಬಿಸಿ**) ಪಾಂಡುರಂಗಾ! ಸಕಲ ಜೀವ ಸಂರಕ್ಷಕನಾದ ನೀನು ನಮ್ಮ ಮಂಬಾಜಿ ಸಾಧುಗಳಿಗೆ ಕುಶಲವನ್ನುಂಟು ಮಾಡು. (**ಇಇ**) (**ಮಂಬಾಜಿಯನ್ನು ನೋಡಿ**) ಪೂಜ್ಯರೇ! ಈಗ ನಿಮ್ಮ ಬಾಧೆಯು ಹೇಗಿದೆ?

**ಮಂಬಾಜಿ**—(**ಸಂತೋಷ ಸಂಕೋಚಗಳಿಂದ ಎದ್ದು, ಆತ್ಮಗತ**) ಏನಾಶ್ಚರ್ಯವಿದು! ಸರ್ಪ ವಿಷವೇರಿ ಮರಣಾವಸ್ಥೆಯಲ್ಲಿದ್ದ ನನ್ನ ಬಾಧೆಯೆಲ್ಲವೂ ಈತನ ಸ್ಪರ್ಶದಿಂದ ಪರಿಹಾರವಾಗಿ ನನಗೆ ನವ ಚೈತನ್ಯವುಂಟಾಯಿತು. ಈ ಮಹಾತ್ಮನ ಸ್ಪರ್ಶದಲ್ಲಿ ಸಂಜೀವನವೇ ಇರುವುದು. ಆಹಾ! ಈತನೆಂತಹ ಮಹನೀಯನು!

**ತುಕಾರಾಮ**—ಪೂಜ್ಯರೇ! ಈಗ ಬಾಧೆಯು ಕಡಿಮೆಯಾಗಿರುವುದೇ?

**ಮಂಬಾಜಿ**—(**ಕೈ ಮುಗಿದು**) ಮಹಾನುಭಾವಾ! ಸಾಧು ಮಹಾರಾಜಾ! ನಾನೇನೆಂದು ಹೇಳಲಿ! ಪರಮ ಕರುಣಾಶಾಲಿಯೂ ಅಮಿತ ಶಾಂತ

ಮೂರ್ತಿಯೂ ಆದ ನಿಮಗೆ ಉತ್ತರವನ್ನು ಹೇಳಲು ನನಗೆ ಮುಖ ವಿಲ್ಲ. ನಾನು ನಿಮಗೆ ದ್ರೋಹವನ್ನೆಣಿಸಿದ ಮಹಾ ಪಾತಕಿಯು. ನಿಮ್ಮ ಕೃಪೆಯಿಂದ ಈ ದಿನ ಈ ವಿಪತ್ತಿನಿಂದ ಪಾರಾದೆನು. ಅಧಮ ನಾದ ನಾನು ನಿಮ್ಮಲ್ಲಿ ಕ್ಷಮೆಯನ್ನು ಬೇಡಲು ಸಹ ಅನರ್ಹನಾಗಿ ರುವೆನು. ನಾನು, ನಿಮ್ಮ ಮಹಿಮೆಯನ್ನರಿಯದೆ ನಿಮ್ಮನ್ನು ನಾನಾ ವಿಧವಾಗಿ ಜರಿದ ಮಹಾ ದೋಷಿಯು. ತಾವು ನನ್ನ ಮಹಾಪರಾಧ ಗಳನ್ನು ಮನ್ನಿಸಬೇಕು. ತಾವೇ ಪ್ರತ್ಯಕ್ಷ ಪಾಂಡುರಂಗಾವತಾರ ವೆಂದು ಭಾವಿಸಿ ತಮಗೆ ಶರಣಾಗತನಾಗಿ ಬೇಡುತ್ತಿರುವೆನು. ಪುಣ್ಯ ಮೂರ್ತಿಯಾದ ತುಕಾರಾಮ ಮಹಾರಾಜರೇ, ಇಂದು ಮೊದಲಾಗಿ ನಾನು ತಮ್ಮನ್ನೇ ಗುರುವೆಂದು ನಂಬಿ, ತಮ್ಮ ಶಿಷ್ಯನಾಗಿರುವೆನು. ತಮ್ಮ ಮಹೋಪಕಾರವನ್ನೂ ಮಹಿಮೆಯನ್ನೂ ಜನ್ಮ ಜನ್ಮಾಂತರ ಗಳಲ್ಲಿಯೂ ಮರೆಯಲಾರೆನು. ನನ್ನನ್ನನುಗ್ರಹಿಸಿ ಕಾಪಾಡಬೇಕು. (ನಮಸ್ಕರಿಸುವನು.)

**ತುಕಾರಾಮ**—(ಮಂಬಾಜಿಯ ಕೈಯನ್ನು ಹಿಡಿದೆತ್ತಿ) ಪಾಂಡುರಂಗ! ಪಾಂಡುರಂಗ! ಮಂಬಾಜೀ ಮಹಾರಾಜರೇ! ತಾವು ದೊಡ್ಡವರು, ಜ್ಞಾನಿಗಳು! ಈ ಅಲ್ಪನಲ್ಲಿ ತಾವು ಇಷ್ಟು ದೀನರಾಗಿ ನುಡಿದು ಪಶ್ಚಾ ತ್ತಾಪ ಪಡಬಹುದೇ? ಸಾಕು, ಪಾಂಡುರಂಗನು ನಮ್ಮೆಲ್ಲರನ್ನೂ ಕೃಪೆಯಿಂದ ಕಾಪಾಡುವನು.

**ತ್ರಿವಿಕ್ರಮ**—ಅಯ್ಯೋ! ಯಾರಪ್ಪಾ? ನನಗೆ ಯಾರೂ ದಿಕ್ಕಿಲ್ಲವೇ?

**ರಂಭೆ**—(ಮುಂದೆ ಹೋಗಿ ನೋಡಿ ಬಂದು) ಸ್ವಾಮಿಾ! ಸ್ವಾಮಿಾ! ತ್ರಿವಿ ಕ್ರಮ ಸಾಧು ಮಹಾರಾಜರು ಮೈ ನೋವಿನಿಂದ ನರಳುತ್ತಿರುವರು! ಏನು ಕಾರಣವಿರಬಹುದು!

**ತುಕಾರಾಮ**—ಏನು? ತ್ರಿವಿಕ್ರಮ ಸಾಧುಗಳೇ? ಅಯ್ಯೋ! ಪಾಪ! (ಓಡಿಬಂದು ನೋಡಿ) ಏನು ಅನರ್ಥವು? ಸಾಧು ಮಹನೀಯರೇ, ಏತಕ್ಕೆ ಈ ರೀತಿ ನರಳುತ್ತಿರುವಿರಿ? ಸಮಾಚಾರವೇನು?

**ತ್ರಿವಿಕ್ರಮ**—ಅಯ್ಯೋ! ತುಕಾರಾಮ ಮಹಾರಾಜರೇ! ಇದು

ಪೂರ್ವಾರ್ಜಿತ ಕರ್ಮ ಫಲವು; ದುರ್ಮಾರ್ಗದ ಪರಿಣಾಮವು! ದುಸ್ಸಹವಾಸದ ವಿಷಮ ಫಲವು!

**ತುಕಾರಾಮ**—ಸ್ವಾಮೀ! ದುಃಖಿಸಬೇಡಿ. ನಾನು ಸ್ವಲ್ಪ ತಮ್ಮ ಸೇವೆಮಾಡಿ ಉಪಚರಿಸುವೆನು. (**ಮೈ ಕೈ ಕಾಲುಗಳನ್ನೊತ್ತುತ್ತ**) ವಿಠಲಾ! ಕರುಣಾಮೂರ್ತಿಯಾದ ವಿಠಲಾ! ನಿನ್ನ ಭಕ್ತರಲ್ಲಿ ದಯೆ ತೋರಿಸು. ಈ ನಮ್ಮ ತ್ರಿವಿಕ್ರಮ ಸಾಧುಗಳಿಗೆ ಕುಶಲವನ್ನುಂಟು ಮಾಡು. (**ಇತ್ತ**) ಪೂಜ್ಯರೇ, ಈಗ ತಮ್ಮ ಮೈ ಕೈ ನೋವು ಹೇಗಿದೆ?

**ತ್ರಿವಿಕ್ರಮ**—(**ಎದ್ದು ಆತ್ಮಗತ**) ಈತನೆಂತಹ ಮಹಾತ್ಮನು! ಈತನ ಹಸ್ತ ಸ್ಪರ್ಶಮಾತ್ರದಿಂದ ನನ್ನ ಅಂಗ ವೇದನೆಯೆಲ್ಲವೂ ನಿವಾರಣೆ ಯಾಯಿತಲ್ಲಾ! ಇಂತಹ ಸಾಧುಶಿರೋಮಣಿಗೆ ಕೇಡನ್ನು ಮಾಡಲು ಉದ್ಯೋಗಿಸಿದ ನಾವೆಂತಹ ಪಾಪಿಗಳು! (**ತುಕಾರಾಮನನ್ನು ನೋಡಿ**) ಮಹಾತ್ಮಾ! ಏನೆಂದು ಹೇಳಲಿ! ತಮ್ಮ ಹಸ್ತ ಸ್ಪರ್ಶಮಾತ್ರದಿಂದ ನನ್ನ ಮೈ ನೋವೆಲ್ಲವೂ ಪರಿಹಾರವಾಯಿತು. ತಮ್ಮ ಮಹಿಮೆಯು ಅಸಾಧಾರಣವಾದುದು! ತಮ್ಮ ವಿಷಯದಲ್ಲಿ ಅಜ್ಞಾನದಿಂದ ದೋಷ ವನ್ನೆಣಿಸಿದ್ದ ನಾನು ಪರಮ ಪಾಪಿಯು! ನನ್ನ ಸರ್ವಾಪರಾಧವನ್ನೂ ಮನ್ನಿಸಬೇಕು.

**ತುಕಾರಾಮ**—ಪೂಜ್ಯರೇ! ತಾವು ಈ ರೀತಿಯಾಗಿ ದೀನರಾಗಿ ನುಡಿಯ ಬಾರದು. ಪಾಂಡುರಂಗನು ನಮ್ಮೆಲ್ಲರನ್ನೂ ಕಾಪಾಡುವನು.

(**ತುಂಬಾಜಿ, ಬಾಲಾಜಿ ಮತ್ತು ಇತರ ಶಿಷ್ಯರು ಭೈರವಸ್ವಾಮಿಯನ್ನು ಹೊತ್ತು ಕೊಂಡು ತುಕಾರಾಮನ ಅಭಂಗಗಳ ಪುಸ್ತಕದ ಸಹಿತವಾಗಿ ಬರುವರು. ಭೈರವ ಸ್ವಾಮಿಯ ಕಾಲಿನಲ್ಲಿ ರಕ್ತವು ಸೋರುತ್ತಿರುವುದು.**)

**ಎಲ್ಲರೂ**—(**ನೋಡಿ ಆಶ್ಚರ್ಯಪಡುವರು.**)

**ಮಂಬಾಜಿ**—ತುಂಬಾಜೀ! ಏನಿದು! ಯಾರನ್ನು ಹೀಗೆ ಹೊತ್ತು ಕೊಂಡು ಬಂದಿರುವಿರಿ? ಸಮಾಚಾರವೇನು?

**ತುಂಬಾಜಿ**—ಗುರುಗಳೇ, ತಮ್ಮ ಅಪ್ಪಣೆಯಂತೆ ನಾನೂ ಬಾಲಾಜಿ ಮೊದಲಾದ ಈ ತಮ್ಮ ಶಿಷ್ಯರೂ ಸಹ ಇಲ್ಲಿಗೆ ಬರುತ್ತಿರುವಲ್ಲಿ "ಅಯ್ಯೋ! ಸತ್ತೆನು!" ಎಂಬ ಆರ್ತಸ್ವರವು ಗಟ್ಟಿಯಾಗಿ ಕೇಳಿಬಂತು.

ಓಡಿ ಹೋಗಿ ನೋಡುವಲ್ಲಿ ಈ ಭೈರವಸ್ವಾಮಿಗಳವರು ಈ ಪುಸ್ತಕ ಗಳ ಗಂಟನ್ನು ಕೈಯಲ್ಲಿ ಹಿಡಿದುಕೊಂಡು ಇಂದ್ರಾಯಣೀ ನದಿಯಲ್ಲಿ ಇಳಿದಿದ್ದರು. ಇವರ ಕಾಲನ್ನು ಒಂದು ಮೊಸಳೆಯು ಹಿಡಿದೆಳೆಯುತ್ತಿತ್ತು. ಅಷ್ಟರಲ್ಲಿಯೇ ನಾವು ಹೋಗಿ ಇವರನ್ನೆಳೆದು ದಡಕ್ಕೆ ತಂದೆವು. ಮೊಸಳೆಯು ನೀರಿನೊಳಕ್ಕೆ ಓಡಿಹೋಯಿತು. ನೋಡಿ! ಕಾಲೆಲ್ಲವೂ ರಕ್ತಮಯವಾಗಿ ಇವರು ಬಾಧೆಯಿಂದ ಪ್ರಜ್ಞೆ ತಪ್ಪಿರುವರು.

**ಮಂಬಾಜಿ**—ಅಯ್ಯೋ! ಪಾಪ! ಭೈರವಸ್ವಾಮಿಗಳಿಗೆ ಇಂತಹ ವಿಪತ್ತು ಒದಗಿತ್ತೇ?

**ತುಕಾರಾಮ**—ಏನಿದಾಶ್ಚರ್ಯವು! ಏಕಾದಶೀ ಮಹಾ ದಿನದಲ್ಲಿ ಸತ್ಕಾಲಕ್ಷೇಪ ಮಾಡಲು ಪ್ರಯತ್ನಿಸಿದ್ದ ಈ ಮೂವರು ಮಹನೀಯರಿಗೂ ಈ ದಿನ ಇಂತಹ ವಿಪತ್ತು ಒದಗಿತಲ್ಲಾ! ವಿಠಲಾ! ನಾನೆಂತಹ ಪಾಪಿಯು! ನಾನು ನನ್ನ ಕೀರ್ತನದಿಂದ ಇವರನ್ನು ಸೇವಿಸಬೇಕೆಂದಿದ್ದರೆ ನಿನಗದು ಸಹನೆಯಾಗಲಿಲ್ಲವೇ! ಈಗಲಾದರೂ ಈ ಭೈರವಸ್ವಾಮಿಗಳಿಗೊದಗಿರುವ ವಿಪತ್ತನ್ನು ಪರಿಹರಿಸಿ ಕಾಪಾಡು. (**ಭೈರವಸ್ವಾಮಿಯ ಮೈದಡವಿ**) ಸ್ವಾಮೀ, ಸಾಧುಮಹನೀಯರೇ! ಏಳಿ! ಪಾಂಡುರಂಗನು ನಿಮಗೆ ಕುಶಲವನ್ನುಂಟುಮಾಡುವನು. (**ವಿಠಲ ಭಜನೆ ಮಾಡುವನು.**) (**೩೩**)

**ಭೈರವಸ್ವಾಮಿ**—(**ಮೇಲಕ್ಕೆದ್ದು**) ಆಹಾ! ಯಾರು ನನ್ನನ್ನಿಲ್ಲಿಗೆ ಕರೆತಂದು ನನಗೆ ಚೈತನ್ಯವನ್ನಿತ್ತವರು? ತುಂಬಾಜೀ! ನಿಮ್ಮ ಉಪಕಾರಕ್ಕೆ ನಾನು ಋಣಿಯಾಗಿರುವೆನು.

**ತುಂಬಾಜಿ**—ಸ್ವಾಮೀ! ಶಿಷ್ಯರಾದ ನಮ್ಮ ವಿಷಯದಲ್ಲಿ ತಾವು ಹಾಗೆ ಹೇಳಬಾರದು! ತಮ್ಮ ದೇಹತಾಪವನ್ನು ಪರಿಹರಿಸಿ ಕಾಪಾಡಿದವರು ಈ ಪೂಜ್ಯರಾದ ತುಕಾರಾಮ ಮಹನೀಯರು.

**ಭೈರವ**—(**ತುಕಾರಾಮನಿಗೆ ನಮಸ್ಕರಿಸಿ**) ಪುಣ್ಯಶೀಲರಾದ ಮಹನೀಯರೇ! ಈ ಶಿಷ್ಯನ ಸರ್ವಾಪರಾಧಗಳನ್ನೂ ಕ್ಷಮಿಸಿ ಕಾಪಾಡಬೇಕು. ಇದೋ, ತಮ್ಮ ಅಭಂಗ ಕವಿತಾ ಪುಸ್ತಕಗಳು; ಇವುಗಳನ್ನು ನಾನು ತೆಗೆದುಕೊಂಡು ಹೋಗಿದ್ದೆನು. ನನ್ನನ್ನು ಕ್ಷಮಿಸಿ ಕಾಪಾಡಬೇಕು.

**ತುಕಾರಾಮ**—ಸಾಧುಮಹನೀಯರೇ ! ಈ ದೈನ್ಯೋಕ್ತಿಗಳೇಕೆ ? ನಮ್ಮೆಲ್ಲರನ್ನೂ ವಿಠಲನು ಕಾಪಾಡುವನು. ಈ ದಿನ ನಮ್ಮ ಕೀರ್ತನಾದಿಗಳನ್ನು ನಡೆಯಿಸಲು ಸಾಧ್ಯವಲ್ಲವಾದ ಕಾರಣ ನಾವೆಲ್ಲರೂ ಈಗ ಮನೆಗಳಿಗೆ ಹೋಗೋಣ. ನಾಳಿನ ದಿನ ವಿಠಲನ ದೇವಾಲಯದಲ್ಲಿ ಹರಿ ಕೀರ್ತನವನ್ನು ನಡೆಯಿಸೋಣ.

**ಎಲ್ಲರೂ**—ಹಾಗೆಯೇ ಆಗಲಿ.

**ಮಂಬಾಜಿ**—ಈಗ ನಾನು ಈ ಪೂಜ್ಯರ ಪುಸ್ತಕಗಳ ಗಂಟನ್ನು ಹೊತ್ತುಕೊಳ್ಳುವೆನು. ಇನ್ನು ತುಕಾರಾಮ ಸಾಧುಗಳ ಗುಣಗಾನ ಮಾಡುತ್ತ ಎಲ್ಲರೂ ಊರಿಗೆ ಹೋಗೋಣ.

**ತುಂಬಾಜಿ**—ಅಪ್ಪಣೆ ಗುರುಗಳೇ ! ನನ್ನ ಸಂತೋಷಕ್ಕೆ ಪಾರವೇ ಇಲ್ಲ.

(**ಮಂಬಾಜಿಯು ಪುಸ್ತಕಗಳ ಗಂಟನ್ನು ಹೊತ್ತುಕೊಳ್ಳುವನು.**)

**ಎಲ್ಲರೂ**— ( ಮಂದಾನಿಲ ರಗಳೆ )

ಜಯ ಭಕ್ತಾಗ್ರಣಿ ತುಕ್ಕಾರಾಮ । ಜಯ ನಿತ್ಯ ಸ್ತುತ ವಿಠ್ಠಲನಾಮ ||
ಜಯ ನಿಜ ನಿರ್ಮಲ ಸದ್ಗುಣಧಾಮ । ಜಯ ಮಹಿಮಾಕರ ನಿರ್ಜಿತಕಾಮ||
ಜಯ ವಿದಿತಾಖಿಲ ತತ್ತ್ವಾರಾಮ । ಜಯ ಸಜ್ಜನ ನುತ ಜಗದಭಿರಾಮ||
ಜಯ ಜಯ ಪರಮಾನಂದ ನಿಕಾಮ । ಜಯ ಭಕ್ತಾಗ್ರಣಿ ತುಕ್ಕಾರಾಮ||
ಜಯ ಹರಿಕೀರ್ತನ ಲೀಲೋದ್ದಾಮ । ಜಯ್ಯ ಭಕ್ತಾವಳಿ ಪರಮ ಪ್ರೇಮ ||
ಜಯ ಸುಜ್ಞಾನಿ ಪ್ರವರ ಲಲಾಮ । ಜಯ ಭಕ್ತಾಗ್ರಣಿ ತುಕ್ಕಾರಾಮ||
ಜಯ ಲೋಷ್ಟೀಕೃತ ಘನಮಣಿಹೇಮ । ಜಯ ಜಯ ಷಡ್ರಿಪು ವರ್ಗ ವಿರಾಮ||
ಜಯ ಸಂತತ ನುತ ಸುಜನ ಸ್ತೋಮ । ಜಯ ಭಕ್ತಾಗ್ರಣಿ ತುಕ್ಕಾರಾಮ||

(**ಸ್ತುತಿಸುತ್ತ ಎಲ್ಲರೂ ತುಕಾರಾಮನೊಡನೆ ಹೋಗುವರು.**)

## ಸ್ಥಾನ ೩—ರಾಜವೀಧಿ

(**ಮಂಬಾಜಿ ತ್ರಿವಿಕ್ರಮ ಭೈರವರು ಮಾತನಾಡುತ್ತ ಬರುವರು.**)

**ತ್ರಿವಿಕ್ರಮ**—ಸ್ವಾಮಿಾ, ಮಂಬಾಜೀ ಸಾಧುಗಳೇ, ಮಂತ್ರವು ಹೇಗೆ ಭಿನ್ನಿಸಿತು ನೋಡಿದರಾ ?

**ಮಂಬಾಜಿ**—ಹೆದರಿಸಲು ಹೋಗಿ ಹೆದರಿಕೊಂಡು ಬಂದಂತಾಯಿತು.

**ಭೈರವ**—ಹೆದರಿಕೊಂಡರೂ ಚಿಂತೆಯಿಲ್ಲ; ಮೂವರೂ ಪ್ರಾಣದಿಂದ ಬಂದೆವಲ್ಲಾ! ಅಷ್ಟೇ ಸಾಕು.

**ತ್ರಿವಿಕ್ರಮ**—ಆ ತುಕಾರಾಮ ಸಾಧುಗಳಲ್ಲಿ ಇಂತಹ ಮಹಿಮೆಯೂ ದೈವ ಕಟಾಕ್ಷವೂ ಇರುವುದೆಂದು ನಾನು ತಿಳಿದಿರಲಿಲ್ಲ.

**ಮಂಬಾಜಿ**—ಸರಿ! ನಾನಂತೂ ಆತನನ್ನು ಕೇವಲ ಬೂಟಾಟಕದ ದಾಸಯ್ಯನೆಂದೇ ತಿಳಿದಿದ್ದೆನು.

**ಭೈರವ**—ಆತನಿರುವ ರೀತಿಯನ್ನು ನೋಡಿದರೆ ಯಾರಾದರೂ ಆತನನ್ನು ಮಹಾತ್ಮನೆಂದು ಹೇಳಲಾಗುವುದೇ ಸ್ವಾಮಿ? ನಾನು ಮೊದಲಿಂದಲೂ ತುಕ್ಕನೆಂದರೆ ಠಕ್ಕನೆಂದೇ ತಿಳಿದಿದ್ದೆನು.

**ಮಂಬಾಜಿ**—ನನಗಂತೂ ಆತನ ಹೆಸರೆತ್ತಿದರೇ ಆಗುತ್ತಿರಲಿಲ್ಲ. ನಾನು ತುಕಾರಾಮನೆಂದು ಸಹ ಬಾಯಿಂದ ಉಚ್ಚರಿಸಿದವನಲ್ಲ. ಸಮಯ ಬಂದಾಗಲೆಲ್ಲವೂ ಆತನನ್ನು ತುಕ್ಕನೆಂದು ತುಚ್ಛ ಭಾವದಿಂದಲೇ ಮಾತನಾಡುತ್ತಿದ್ದೆನು.

**ತ್ರಿವಿಕ್ರಮ**—ನೋಡಿ, ಆತನ ಶಕ್ತಿಯೂ ಮಹಿಮೆಯೂ ಈಗ ನಮಗೆ ಗೋಚರವಾಯಿತು.

**ಮಂಬಾಜಿ**—ಅನುಭವದಿಂದಲೇ ಬುದ್ಧಿ ಬರಬೇಕೆಂಬ ಮಾತು ನಿಜ.

**ಭೈರವ**—ಅನುಭವವೆಂದರೆ ಅಂತಿಂತಹ ಸಾಮಾನ್ಯವಾದ ಅನುಭವವಲ್ಲ. ಪ್ರಾಣ ಹೋಗುವಂತಹ ಅನುಭವ.

**ತ್ರಿವಿಕ್ರಮ**—ನಿಜ, ನೋಡಿ. ನಾವು ಮೂರು ಮಂದಿಯೂ ಆತನಿಗೆ ಕೇಡುಕನ್ನು ಮಾಡಬೇಕೆಂದು ಪ್ರಯತ್ನಸಿದುದಕ್ಕೆ ಒಬ್ಬೊಬ್ಬರಿಗೆ ಒಂದೊಂದು ವಿಧವಾದ ಪ್ರಾಣಾಪಾಯವೇ ಒದಗಿತು. ಕಡೆಗೂ ಆತನಿಂದಲೇ ಅದು ನಿವಾರಣೆಯಾಯಿತು. ಆತನು ಮಹನೀಯನೆಂಬುದಕ್ಕೆ ಇದಕ್ಕಿಂತಲೂ ದೃಷ್ಟಾಂತವು ಬೇಕೇ?

**ಮಂಬಾಜಿ**—ಸ್ವಾಮಿ, ಆತನು ಮಹನೀಯನಲ್ಲದಿದ್ದರೆ, ಈ ವರೆಗೆ ನಾನಾತನ ವಿಷಯದಲ್ಲಿ ಆತನ ಎದುರಲ್ಲಿಯೇ ಆಡಿರುವ ಮಾತುಗಳಿಗೂ ಮಾಡಿರುವ ಅನರ್ಥಗಳಿಗೂ ಆತನು ಮತ್ತೆ ನನ್ನ ಮುಖವನ್ನೇ

ನೋಡುತ್ತಿರಲಿಲ್ಲ. ಹೀಗಿರುವಲ್ಲಿ ನಾವು ಹೇಳಿದಂತೆ ನಿಶಾ ಸಮಯ ದಲ್ಲಿ ನಮ್ಮ ಮಾತನ್ನು ಗೌರವಿಸಿ, ಪುಸ್ತಕಗಳ ಸಹಿತವಾಗಿ ನಮಗಿಂ ತಲೂ ಮೊದಲೇ ಬಂದು ನಮಗಾಗಿ ಕಾದಿದ್ದನಲ್ಲಾ! ಆತನು ಮಹಾನುಭಾವನಲ್ಲವೇ ಸ್ವಾಮಿಾ?

**ಭೈರವ**—ನಮಗಾಗಿ ಕಾದಿದ್ದುದಿರಲಿ. ತನಗಪಕಾರವನ್ನೆಣಿಸಿದ ದ್ರೋಹಿ ಗಳು ಸತ್ತರೆ ಸಾಯಲಿ ಎಂದು ಉದಾಸೀನನಾಗದೆ, ನಮ್ಮ ವಿಷಯ ದಲ್ಲಿ ಕನಿಕರವನ್ನು ತೋರಿ, ನಮ್ಮ ಪ್ರಾಣಗಳನ್ನುಳಿಸಿದನಲ್ಲಾ! ಇನ್ನು ಆತನು ಅರಿಷಡ್ವರ್ಗಗಳನ್ನು ಜಯಿಸಿದ ದಯಾರಸ ಮೂರ್ತಿ ಯೆಂಬುದಕ್ಕೆ ಬೇರೆ ದೃಷ್ಟಾಂತವು ಬೇಕೇ? ಆತನ ಹಸ್ತಸ್ಪರ್ಶಮಾತ್ರ ದಿಂದ ಸರ್ಪವಿಷವು ಸಹ ನಿವಾರಣೆಯಾಯಿತು. ನಮ್ಮ ಶರೀರದ ಬಾಧೆಯೂ ಪರಿಹಾರವಾಯಿತು; ಆತನೆಂತಹ ಮಹಾನುಭಾವನು!

**ತ್ರಿವಿಕ್ರಮ**—ನಿಜ! ಇಂತಹ ಮಹನೀಯನ ಸತ್ತ್ವವನ್ನರಿಯದೆ ನಾವು ದುಡುಕಿ ದುಃಖವನ್ನೂ ದುರಿತವನ್ನೂ ಪಡೆದೆವು. ಜ್ಞಾನಿಗ ಳೆಂದರೆ ಪುಸ್ತಕಾಧ್ಯಯನದಿಂದ ವಿಷಯಗಳನ್ನು ತಲೆಗೆ ತುಂಬಿ ಕೊಂಡಿದ್ದ ಮಾತ್ರಕ್ಕೇ ಅಂತಹವರು ಜ್ಞಾನಿಗಳೆನಿಸಲಾರರು. ನಿಜ ವಾಗಿಯೂ ಕಾಮ ಕ್ರೋಧಾದಿಗಳನ್ನು ಬಿಟ್ಟು ದೈವನ್ಯಸ್ತಚಿತ್ತ ರಾಗಿ ಮನೋನಿಗ್ರಹ ಮಾಡಿ, ಸರ್ವ ಪ್ರಾಣಿಗಳನ್ನೂ ಸಮಾನವಾಗಿ ಕಾಣುತ್ತ ಅಂತಶ್ಚಕ್ಷುಗಳನ್ನು ತೆರೆದು, ನೋಡಿದರೆ ಜ್ಞಾನ ಮಾರ್ಗವು ಗೋಚರವಾಗುವುದು; ಮುಕ್ತಿದ್ವಾರವು ಸಮಿಾಪವಾಗುವುದು. ನಾವಾದರೋ ಬರಿಯ ವಾಗ್ವೇದಾಂತದಿಂದ ನಮ್ಮಷ್ಟಕ್ಕೆ ನಾವು ಜ್ಞಾನಿಗಳೆಂದು ಹೇಳಿಕೊಳ್ಳುತ್ತಿರುವ ಅಜ್ಞಾನಿಗಳು. ಆದುದರಿಂದ ನಮಗೆ ಬುದ್ಧಿಯನ್ನು ಕಲಿಸಲು ದೇವರೇ ಇಂತಹ ಸಂಧಿಯನ್ನು ಕಲ್ಪಿಸಿದನೆಂದು ಹೇಳಬಹುದು.

**ಮಂಬಾಜಿ**—ನಿಜ! ಸಾಧುಮಹಾರಾಜರೇ! ನಿಜ! ನಿಜ! ನನ್ನ ಅವಿವೇಕವೆಲ್ಲವೂ ಈಗ ನನಗೆ ಗೋಚರವಾಯಿತು. ಇಂತಹ ಅನು ಭವದಿಂದ ಹಿಂದಣ ಅವಿವೇಕಕ್ಕೆ ಪಶ್ಚಾತ್ತಾಪಪಟ್ಟು ಮುಂದೆ ಸತ್ಪ್ರ ವರ್ತನೆಯಿಂದಿರಲು ಆ ಮಹಾನುಭಾವನ ಕ್ಷಣಕಾಲದ ಸಹವಾಸವೇ

ಕಾರಣವಾಯಿತು. ಆತನ ಸ್ಪರ್ಶ ಸಂಭಾಷಣಗಳೇ ನಮ್ಮನ್ನು ಅಜ್ಞಾನಾಂಧಕಾರದಿಂದ ಉದ್ಧರಿಸಿದವು. ಆದುದರಿಂದ ಇನ್ನು ನಮಗೆ ತುಕಾರಾಮ ಮಹಾರಾಜನೇ ಗುರುವು. ಇನ್ನು ಎಂದಿಗೂ ಆತನಲ್ಲಿ ದೋಷವನ್ನೆಣಿಸದೆ ಆಗಾಗ ಆತನ ಉಪದೇಶೋಕ್ತಿಗಳನ್ನು ಕೇಳಿ ಸುಜ್ಞಾನವನ್ನು ಪಡೆಯಬೇಕೆಂದು ನಾನು ಸಂಕಲ್ಪಿಸಿರುವೆನು.

**ಭೈರವ**—ನಿಜ! ಆ ರೀತಿ ಮಾಡಲೇ ಬೇಕು. ಇನ್ನು ತುಕಾರಾಮ ಸಾಧುಗಳೇ ನನ್ನ ಪರಮ ಗುರುವು. (**ಕೈ ಮುಗಿಯುವನು.**)

**ತ್ರಿವಿಕ್ರಮ**—ಈ ದಿನ ವಿಠಲ ದೇವಾಲಯದಲ್ಲಿ ಆ ತುಕಾರಾಮ ಮಹಾರಾಜನ ಹರಿಕೀರ್ತನವು ನಡೆಯುವುದಷ್ಟೆ! ನಾವೆಲ್ಲರೂ ಅಲ್ಲಿಗೆ ಹೋಗಿ ಹರಿಕಥಾಶ್ರವಣ ಮಾಡಿ ಬರೋಣ, ಬನ್ನಿ. (**ಹೋಗುವರು.**)

(**"ದಿಲಾವರ್ ಖಾನ್" ಮತ್ತು "ರಹಮತ್ ಖಾನ್" ಎಂಬ ಮಹಮ್ಮದೀಯ ಸೇನಾಪತಿಗಳು ಭಟರೊಡನೆ ಪ್ರವೇಶಿಸುವರು.**)

**ದಿಲಾವರ್ ಖಾನ್**—ಶಿವಾಜಿ! ಶಿವಾಜಿ!! ಶಿವಾಜಿ!!! ಈ ಹಾಳು ಶಿವಾಜಿಯ ಹೆಸರೇ ನಮಗೆ ಪಾರಾಯಣವಾಯಿತು. ಅವನನ್ನು ಹುಡುಕಿಕೊಂಡು ಊರೂರು, ಬೆಟ್ಟಗುಡ್ಡ, ಕೋಟೆಕೊತ್ತಲಗಳನ್ನು ಸುತ್ತಿ ಸುತ್ತಿ ಸಾಯುವುದೇ ಉದ್ಯೋಗವಾಯಿತು! ಪೂನಾ ನಗರ ಪ್ರಾಂತದಲ್ಲೆಲ್ಲವೂ ಹುಡುಕಿದುದಾಯಿತು. ಸೋಲಾಪುರವನ್ನೆಲ್ಲ ಶೋಧಿಸಿ ನೋಡಿದುದಾಯಿತು. ಬಿಜಾಪುರದಲ್ಲೆಲ್ಲಿಯೂ ಬಿಡದೆ ಹುಡುಕಿದುದಾಯಿತು. ಅವನ ಸುಳಿವೇ ಇಲ್ಲ. (**ರಹಮತ್ ಖಾನನನ್ನು ನೋಡಿ**) ರಹಮತ್ ಖಾನ್, ಇನ್ನೆಲ್ಲಿ ಆ ಮೋಸಗಾರನನ್ನು ಹುಡುಕುವುದು?

**ರಹಮತ್ ಖಾನ್**—ದಿಲಾವರ್ ಖಾನ್! ಎಲ್ಲಿದ್ದರೂ ಹುಡುಕಿ ಸೆಳೆದುಕೊಂಡೇ ಹೋಗಬೇಕಲ್ಲದೆ, ಸಿಕ್ಕಲಿಲ್ಲವೆಂದು ಹಿಂದಿರುಗಿದರೆ ನಮಗೆ ಬಾದುಷಹನಿಂದ ಮರಣದಂಡನೆಯೇ ಆಗುವುದು. ಆದುದರಿಂದ ಎಷ್ಟು ಶ್ರಮವನ್ನಾದರೂ ಪಟ್ಟು ಅವನನ್ನು ಸೆಳೆದುಕೊಂಡೇ ಹೋಗಬೇಕು. ಈ ಊರಲ್ಲಿಯೂ ಹುಡುಕೋಣ.

**ದಿಲಾವರ್**—ಎಲ್ಲಿ ಹುಡುಕಬೇಕೋ ನಾನು ಕಾಣೆ. ಆ ದ್ರೋಹಿಯು ಈ ಕ್ಷಣ ಇಲ್ಲಿದ್ದರೆ ಇನ್ನೊಂದು ಗಳಿಗೆಯೊಳಗಾಗಿ ಅರವತ್ತು ಗಾವುದ ದಾಚೆ ಕಾಣಿಸಿಕೊಳ್ಳುತ್ತಾನೆ. ಇಲಿಯು ಬಿಲವನ್ನು ಹೊಕ್ಕಂತೆ, ಕ್ಷಣಾರ್ಧದಲ್ಲಿ ಯಾರಿಗೂ ಕಾಣದೆ ಬೆಟ್ಟ ಗುಡ್ಡ ಗವಿಗಳ ಸಂದಿಗಳಲ್ಲಿ ಸೇರಿಕೊಂಡು ನಮ್ಮನ್ನು ಕಾಡಿಸುತ್ತಿದ್ದಾನೆ.

**ರಹಮತ್ ಖಾನ್**—ನಿಜ! ಈ ಹಾಳು ಶಿವಾಜಿಯೆಂಬ ವ್ಯಾಧಿಯು ಮಹಮ್ಮದೀಯ ದೊರೆಗಳಿಗೆ ಜನ್ಮಕ್ಕೇ ಅಂಟಿ ಬಂದುದಾಗಿದೆ. ಅವನ ಹಾವಳಿಯಿಲ್ಲದಿರುವ ಮಹಮ್ಮದೀಯ ರಾಜ್ಯವೇ ಇಲ್ಲ.

**ದಿಲಾವರ್**—ಆದುದರಿಂದಲೇ ಈ ಸಲ ಅವನು ನಮ್ಮ ಕೈಗೆ ಸಿಕ್ಕಿದರೆ ಶಸ್ತ್ರ ಚಿಕಿತ್ಸೆಯಿಂದಲೇ ಆ ವ್ಯಾಧಿಯನ್ನು ನಿರ್ನಾಮಮಾಡಿ ಬಿಡ ಬೇಕೆಂದು ನಮ್ಮ ಬಾದುಷಹರು ನಿರ್ಧರಿಸಿರುವರು.

**ರಹಮತ್ ಖಾನ್**—ಸರಿ, ಅವನು ಸಿಕ್ಕಿದರೆ ತಾನೆ? ನಮ್ಮ ಸರದಾರ ರನೇಕರು ಅವನನ್ನು ಹಿಡಿದು ತರುವೆನೆಂದು ಹಿಂದೆ ಶಪಥ ಮಾಡಿ ಕೊಂಡು ಹೊರಟು ಪಡೆದ ಅನುಭವಗಳನ್ನು ನೀನು ಕೇಳಿಲ್ಲವೇನು?

**ದಿಲಾವರ್**—ಸರಿ; ಅವರು ವಿಫಲರಾದ ಮಾತ್ರಕ್ಕೇ ನಾವೂ ಪ್ರಯತ್ನ ಪಡದೆ ಸುಮ್ಮನಿರಬೇಕೇನು?

**ರಹಮತ್ ಖಾನ್**—ಪ್ರಯತ್ನಪಟ್ಟೇ ಇರುವೆವಲ್ಲವೇ! (**ಮುಂದೆ ನೋಡಿ**) ಅದೇನು ಹಾಗೆ ನೂರಾರು ಜನರು ಗುಂಪಾಗಿ ಆ ಕಡೆ ಹೋಗುತ್ತಿರು ವರು? ಅವನೇ ಏನಾದರೂ ಬಂದು ಆಟವನ್ನು ಹೂಡಿರುವನೋ!

**ದಿಲಾವರ್**—ಆ ನೀಚ ಶಿವಾಜಿಯು ಹಿಂದೂ ಧರ್ಮವನ್ನು ಅಭಿವೃದ್ಧಿ ಪಡಿಸಿ ಎಲ್ಲರನ್ನೂ ಮಹಮ್ಮದೀಯರಿಗೆ ವಿರೋಧಿಗಳನ್ನಾಗಿ ಮಾಡಲು ನಾನಾ ವಿಧವಾದ ಆಟಗಳನ್ನು ಹೂಡುತ್ತಲೇ ಇರುವನು. ಈಗಲೂ ಅವನೇ ಯಾವುದಾದರೂ ಆಟವನ್ನು ಹೂಡಿದ್ದರೂ ಇರಬಹುದು.

**ರಹಮತ್ ಖಾನ್**—ಯಾವ ಆಟವನ್ನಾದರೂ ಹೂಡಿರಲಿ! ಏನು ಮಾಟ ವನ್ನಾದರೂ ಮಾಡಿರಲಿ. ಸದ್ಯಕ್ಕೆ ಅವನು ಇಲ್ಲಿ ನಮ್ಮ ಕಣ್ಣಿಗೆ ಕಂಡರೆ ಸಾಕು; ಎಷ್ಟು ಶ್ರಮವಾದರೂ ಪಟ್ಟು ಹಿಡಿಯಲೇ ಬೇಕು.

**ದಿಲಾವರ್**—ಓಹೋ! ಸದ್ಯಕ್ಕೆ ಅಲ್ಲನ ಕೃಪೆಯಿಂದ ಅವನು ಕಣ್ಣಿಗೆ ಬಿದ್ದರೆ ಸಾಕು.

**ಭಟ**—( **ಪ್ರವೇಶಿಸಿ** ) ಸ್ವಾಮಿ, ಏತಲ ದೇವಸ್ಥಾನದಲ್ಲಿ ತುಕಾರಾಮು ಸಾಧುಗಳ ಹರಿಕಥೆಯಂತೆ. ಅಲ್ಲಿಗೆ ಛತ್ರಪತಿ ಮಹಾರಾಜರು ಬರುತ್ತಾರೆಂದು ಜನರು ಗುಂಪು ಗುಂಪಾಗಿ ಹೋಗುತ್ತಾ ಇದ್ದಾರೆ.

**ದಿಲಾವರ್**—ಯಾ ಅಲ್ಲಾ! ನಾವೇ ಪುಣ್ಯವಂತರು! ಸಿಕ್ಕಿದ, ಶಿವಾಜಿಯು ಕೈಗೆ ಸಿಕ್ಕಿದ!

**ರಹಮತ್ ಖಾ**—ನಿಜ, ದಿಲಾವರ್ ಖಾನ್, ಆ ಶಿವಾಜಿಯು ತುಕಾರಾಮನೆಂಬ ತಿರುಕನಿಗೆ ಶಿಷ್ಯನೆಂತಲೂ, ಅವನು ಆಗಾಗ ಅವನ ಬಳಿಗೆ ಬರುವನೆಂತಲೂ ನಾನು ಕೇಳಿದ್ದೆನು. ಆದರೆ ಈ ದಿನವೇ ಅವನು ನಮಗೆ ಹೀಗೆ ಸಂಧಿಸುವನೆಂದು ನಾನು ನಂಬಿರಲಿಲ್ಲ.

**ದಿಲಾವರ್**—ಸರಿ! ಹಾಗಾದರೆ ನಾವು ಗೆದ್ದಂತೆಯೇ ಸರಿ! ಒಳ್ಳೆಯ ಗಳಿಗೆಯಲ್ಲಿ ನಾವು ಹೊರಟಂತಾಯಿತು. ಇನ್ನು ಅವನನ್ನು ಹಿಡಿಯಲು ಉಪಾಯವೇನು?

**ರಹಮತ್ ಖಾ**—ಈಗಲೇ ದುಡುಕಬಾರದು; ನಾವು ಎಲ್ಲಿಯಾದರೂ ಅಡಗಿಕೊಂಡು ಜನರೆಲ್ಲರೂ ದೇವಸ್ಥಾನದ ಒಳಗೆ ಸೇರಿ, ಶಿವಾಜಿಯೂ ಬಂದು, ಅಲ್ಲಿ ಅವರ ಕಥೆಯೋ ಕಗ್ಗವೋ ಆರಂಭವಾಗುವವರೆಗೂ ಸದ್ದಿಲ್ಲದೆ ಸುಮ್ಮನಿರಬೇಕು. ಆನಂತರ ಸಮಯ ನೋಡಿ ಹಠಾತ್ತಾಗಿ ಹೋಗಿ ಸೈನ್ಯವನ್ನು ದೇವಸ್ಥಾನದ ಸುತ್ತಲೂ ನಿಲ್ಲಿಸಿ, ನಾವು ಕೆಲವರು ಮಾತ್ರ ಒಳಗೆ ಹೋಗಿ ಆ ದುಷ್ಟನನ್ನು ಹಿಡಿದು ತರೋಣ! ಇನ್ನು ಭಯವೇನು!

**ದಿಲಾವರ್**—ನಿಜ, ಉಪಾಯವು ಬಹಳ ಚೆನ್ನಾಗಿದೆ. ಹಾಗೆಯೇ ಮಾಡಬೇಕು. ಇನ್ನು ನಾವು ಸ್ವಲ್ಪ ಮರೆಯಾಗಿರೋಣ, ಬನ್ನಿ.

**(ಹೋಗುವರು.)**

## ಸ್ಥಾನ ೪—ಪಾಂಡುರಂಗನ ದೇವಾಲಯ

**(ತುಕಾರಾಮನ ಕೀರ್ತನವನ್ನು ಕೇಳಲು ಶಿವಾಜಿಯು ಪತ್ನಿಯೊಡನೆ ಬಂದು ಕುಳಿತಿರುವನು. ಆತನ ಕಡೆಯ ಅಧಿಕಾರಿಗಳೂ ಗ್ರಾಮದ ಇತರ ಜನರೂ ನೆರೆದಿರುವರು.)**

**ತುಕಾರಾಮ—**

**ಶ್ಲೋ॥** ವೇದಾನುದ್ಧರತೇ ಜಗಂತಿವಹತೇ ಭೂಗೋಳ ಮುದ್ಬಿಭ್ರತೇ।
ದೈತ್ಯಂದಾರಯತೇ ಬಲಿಂಚಲಯತೇ ಕ್ಷತ್ರಕ್ಷಯಂ ಕುರ್ವತೇ॥
ಪೌಲಸ್ತ್ಯಂ ಹರತೇ ಹಲಂಕಲಯತೇ ಕಾರುಣ್ಯ ಮಾತನ್ವತೇ।
ಮ್ಲೇಚ್ಛಾನ್ ಮೂರ್ಛಯತೇ ದಶಾಕೃತಿಕೃತೇ ಕೃಷ್ಣಾಯ ತುಭ್ಯಂ ನಮಃ ||

ಜಯ ಪುಂಡರೀಕ ವರದ!

**ಎಲ್ಲರೂ**—ಹರಿ ವಿಠಲಾ!

**ತುಕಾರಾಮ— ತೋಹರಾ॥**

ಧರ್ಮನೀತಿಗಳ ವಿಾರದೆ ನಿಜ ಮತ। ಕರ್ಮವನೆಸಗುತೆ ಭಕ್ತಿಯೊಳು ||
ನಿರ್ಮಲ ಮನದಿಹ ನರರಿಗೆ ಮುಕ್ತಿಯು। ಮರ್ಮವು ಕಾಂಬುದು ಸುಲಭದೊಳು ||
ಅರಿಷಡ್ವರ್ಗಾದಿಗಳನು ದೂರೀ। ಕರಿಸುತಲಿಂದ್ರಿಯಗಳ ಸದೆದು ||
ಸ್ಥಿರ ಚಿತ್ತದೆ ವಿಠ್ಠಲನನು ಭಜಿಸುವ। ನರರಿಗೆ ನಿಜ ಸುಖ ಲಭಿಸುವುದು ||

ಸುಖಾಭಿಲಾಷಿಗಳಾದ ಜನರು ಮೊದಲು "ಸುಖವೆಂದರೇನು, ಶಾಶ್ವತವಾದ ಸುಖವಾವುದು" ಎಂಬುದನ್ನು ಪರಿಶೀಲಿಸಬೇಕು. ಅಸ್ಥಿರವಾದ ಈ ದೃಶ್ಯ ಪ್ರಪಂಚದಲ್ಲಿ ಕಾಣುವ ಸಂಸಾರ ಸುಖವೂ ಈ ಪ್ರಪಂಚದಂತೆಯೇ ನಶ್ವರವಾದುದೆಂದು ತಿಳಿದು ಸ್ಥಿರವಾಗಿಯೂ ನಿಜವಾಗಿಯೂ ಇರುವ ಪರಂಜ್ಯೋತಿ ಸ್ವರೂಪನ ಸಾಕ್ಷಾತ್ಕಾರ ವನ್ನು ಪಡೆದು ನಿತ್ಯಾನಂದಮಯನಾಗುವುದೇ ಸ್ಥಿರ ಸುಖವೆಂದರಿತು ಅಂತಹ ದೈವ ಸಾಕ್ಷಾತ್ಕಾರವನ್ನು ಪಡೆಯಲು ತಕ್ಕ ಜ್ಞಾನ ವನ್ನಾರ್ಜಿಸಲು ಪ್ರಯತ್ನಿಸಬೇಕು. ಇದಕ್ಕಾಗಿ ಜ್ಞಾನಪ್ರದವಾದ

ಸತ್ಕರ್ಮವನ್ನು ನಿರ್ಮಲಚಿತ್ತದಿಂದಾಚರಿಸಬೇಕು. ಕಾಮ ಕ್ರೋಧಾದಿಗಳನ್ನು ಬಿಟ್ಟು ಪ್ರಪಂಚದ ಸಕಲ ಚೇತನಾಚೇತನ ವಸ್ತುಗಳೂ ಪರಬ್ರಹ್ಮ ಸ್ವರೂಪವೆಂದು ತಿಳಿದು ಧರ್ಮ ಮಾರ್ಗದಲ್ಲಿ ವರ್ತಿಸುತ್ತಿರಬೇಕು.........

**ಪಂಡಿತರಾಯ**—(**ಕಾತುರನಾಗಿ ಓಡಿ ಬಂದು ಶಿವಾಜಿಯನ್ನು ಕುರಿತು**) ಮಹಾಸ್ವಾಮಿ! ತಾರಣ ಕೋಟೆಯ ರಕ್ಷಕನಾದ ಮುಹಮ್ಮದೀಯ ರಾಜಾಧಿಕಾರಿಯು, ತಮ್ಮ ನೆಲೆಯನ್ನರಿತು ತಮ್ಮನ್ನು ಹಿಡಿದು ತರಲು ಭಟರನ್ನು ಕಳುಹಿಸಿರುವನು. ಅವರಿನ್ನೂ ಈ ದೇವಸ್ಥಾನದ ವರೆಗೂ ಬಂದಿಲ್ಲ. ಆದರಿಂದ ತಾವೀಗಲೇ ಇಲ್ಲಿರುವ ಕಳ್ಳಗಂಡಿಯಲ್ಲಿ ಹೊಕ್ಕು ಗುಪ್ತ ಮಾರ್ಗದಿಂದ ಮಹಾರಾಜ್ಞಿಯವರನ್ನು ಕರೆದುಕೊಂಡು ಮೊದಲು ತಪ್ಪಿಸಿಕೊಂಡು ಹೋಗಬೇಕು. ಪ್ರಸಂಗವು ಅತಿ ಕಠಿನವಾಗಿರುವುದು. ನನ್ನ ಪ್ರಾಣವಿರುವವರೆಗೂ ತುಕಾರಾಮ ಮಹಾರಾಜರಿಗೆ ಯಾವ ಅಪಾಯವೂ ಬರಲಾರದೆಂದು ನಂಬಿ ತಾವೀಗಲೇ ಬೇಗನೆ ಪ್ರಯಾಣ ಮಾಡಬೇಕು.

**ಶಿವಾಜಿ**—ಏನು? ಏನೆಂದು ಹೇಳಿದೆ ಪಂಡಿತರಾವ್? ಇಂತಹ ಸಂದರ್ಭದಲ್ಲಿ ಕಳ್ಳಗಂಡಿಯಲ್ಲಿ ಹೋಗಬೇಕೆಂದು ನನಗೆ ಹೇಳುವೆಯಾ? ಪಂಡಿತರಾವ್! ಈ ಶಿವಾಜಿಯು ಎಂತಹ ವೀರನೆಂಬುದು ಈವರೆಗೂ ನಿನಗೆ ತಿಳಿದಂತೆಯಿಲ್ಲ; ಪ್ರಾಣಕ್ಕೆ ಪ್ರಾಣವನ್ನು ಕೊಡುವ ನಿನ್ನಂತಹ ಸ್ನೇಹಿತನೂ, ಪರಮ ಪೂಜ್ಯರಾದ ತುಕಾರಾಮ ಮಹಾರಾಜರಂತಹ ಸದ್ಗುರುವೂ, ಭಜನಲೀನಮಾನಸರಾದ ಇಂತಹ ಮಹಾ ಭಕ್ತಜನರೂ, ಇಷ್ಟು ಮಂದಿಯನ್ನೂ ಶತ್ರುಗಳ ಕೈಗೆ ಸಿಕ್ಕಿಸಿ, ನನ್ನ ಈ ಅಲ್ಪ ದೇಹವೊಂದನ್ನು ಕಾಪಾಡಿಕೊಳ್ಳಲು ಓಡಿಹೋಗುವುದಕ್ಕೆ ನಾನೇನು ಹೇಡಿಯೇ? ಷಂಡನೇ? ಅಲ್ಪವಾದ ಇಂತಹ ನಡತೆಯಿಂದ ತನ್ನ ಹೆಸರಿಗೂ ಜಾತಿಗೂ ಕುಲಕ್ಕೂ ಕಳಂಕವನ್ನುಂಟುಮಾಡಿ ಓಡಿಹೋಗತಕ್ಕವನೇ ಈ ಶಿವಾಜಿಯು? ಸಾವಿರಾರು ಮಂದಿ ಶತ್ರುಗಳು ಬಂದರೂ ಈ ದೇಹದಲ್ಲಿ ಪ್ರಾಣವಿರುವವರೆಗೂ ಒಬ್ಬನೇ ನಿಂತು ಯುದ್ಧಮಾಡಿ ಶತ್ರುಗಳನ್ನು ಸದೆಬಡಿಯುವೆನು. ಒಂದು ವೇಳೆ ಶತ್ರು

ಗಳು ನನ್ನ ಕುತ್ತಿಗೆಯನ್ನೇ ಕತ್ತರಿಸಿದರೂ ಈ ಮುಂಡವೇ ನುಗ್ಗಿ ಶತ್ರುಗಳನ್ನು ಕತ್ತರಿಸಿದ ಮೇಲೆ ನನ್ನ ಪ್ರಾಣವು ಶಾಂತವಾಗುವು ದೆಂದು ತಿಳಿ. ಪಂಡಿತರಾವ್, ಈ ಬಡ ಶತ್ರುಗಳೆಷ್ಟು ಮಾತ್ರದವರು! ಅವರ ಶಸ್ತ್ರಗಳೆಷ್ಟರವು!! ಪ್ರಳಯಕಾಲದ ಸಿಡಿಲೇ ನನ್ನಮೇಲೆ ಬೀಳುವುದಾದರೂ, ಎಲ್ಲಿಯವರೆಗೆ ತುಕಾರಾಮ ಗುರುಗಳ ಮುಖ ದಿಂದ ಹೊರಡುವ ಪಾಂಡುರಂಗನ ನಾಮ ಕೀರ್ತನವು ನನ್ನ ಕಿವಿಯಲ್ಲಿ ಬೀಳುತ್ತಿರುವುದೋ ಅವರೆಗೂ ನನಗೆ ವಿಪತ್ತು ಬರುವುದೆಂದರೇನು ? ಬಂದರೂ ನಾನು ಹೆದರಿ ಒಂದು ಹೆಜ್ಜೆಯಷ್ಟಾದರೂ ಹಿಮ್ಮೆಟ್ಟುವು ದೆಂದರೇನು ! ಇಂತಹ ಪುಣ್ಯ ದಿನದಲ್ಲಿ ಈ ಅಸಂಖ್ಯಾತವಾದ ಹರಿ ಭಕ್ತ ಮಂಡಲಿಯನ್ನು ರಕ್ಷಿಸುವುದಕ್ಕಾಗಿ ಶತ್ರುಗಳೊಡನೆ ಯುದ್ಧ ಮಾಡುತ್ತ ನಾನು ಮೃತ್ಯುವಶನಾದರೆ ನನ್ನಂತಹ ಪುಣ್ಯವಂತನೂ ಭಾಗ್ಯವಂತನೂ ತ್ರಿಭುವನದಲ್ಲಿ ಯಾವನೂ ಇಲ್ಲ. ಪಾಂಡುರಂಗನ ಮಹಿಮೆಗಳಲ್ಲಿ ನನಗೆ ಪರಿಪೂರ್ಣವಾದ ನಂಬಿಕೆಯಿರುವುದು. ಇನ್ನು ನಾನು ಈ ಕ್ಷುದ್ರ ಶತ್ರುಗಳಿಗೆ ಹೆದರಬೇಕೇ? **(ತುಕಾರಾಮನನ್ನು ನೋಡಿ)** ಗುರು ಮಹಾರಾಜಾ! ನಡೆಯಲಿ, ಭಜನೆ ನಡೆಯಲಿ; ವಿಠಲ ನಾಮಾ ಮೃತ ಪ್ರವಾಹವು ಉಕ್ಕಿ ಹರಿಯಲಿ!

**ತುಕಾರಾಮ**—ಆಹಾ! ವೀರ ಶಿಖಾಮಣೀ, ವಿಠಲನು ನಿನಗೆ ವಿಜಯ ವನ್ನೇ ಕರುಣಿಸುವನು.

**ಭಾ**|| ಅರಿಗಳಾವರಿಸುತ್ತ ಮಸ್ತ್ರೋ।
ತ್ಕರವ ಬೀರಿದೊಡಂತು ಶಸ್ತ್ರದೊ।
ಳಿರಿದೊಡಂ ಬಹು ವಿಧದ ಹಿಂಸೆಗೆ ಗುರಿಯ ಮಾಡಿದೊಡಂ ||
ಹರಿಯ ನಾಮ ಸ್ಮರಣೆಯನು ತಾಂ।
ತೊರೆಯದಿರ್ಪನ ನೊಲಿದು ನರಹರಿ।
ಪೊರೆವನೆಂದನುಭವದೆ ತುಕ್ಕಾರಾಮ ನರಿತಿಹನು ||

ಆದಕಾರಣ ಹರಿಭಕ್ತರು ನಿಶ್ಚಲ ಮನದಿಂದ ನಾಮಸ್ಮರಣೆ ಮಾಡುತ್ತಿ ದ್ದರೆ ಅವರನ್ನು ಯಾವ ಶತ್ರುಗಳೂ ಏನೂ ಮಾಡಲಾರರು.

**ದಿಲಾವರ್ ಖಾನ್** ಮತ್ತು **ರಹಮತ್ ಖಾನ್**—( **ನುಗ್ಗಿ** ) ಹಿಡಿಯಿರಿ, ಹಿಡಿಯಿರಿ, ಬನ್ನಿ. ಇದೋ, ಶಿವಾಜಿ ಇಲ್ಲಿದ್ದಾನೆ. **ಹಿಡಿಯಿರಿ** ! ಮೊದಲು ಹಿಡಿಯಿರಿ.

**ದಿಲಾವರ್ ಖಾನ್**—(**ಭ್ರಾಂತನಾಗಿ ಬೇರೆ ಕಡೆ ತೋರಿಸಿ**) ಇದೋ ಇದೊ! ಈ ಕಡೆ ಇದ್ದಾನೆ ಶಿವಾಜಿ! ಇವನನ್ನು ಹಿಡಿಯಿರಿ.

**ರಹಮತ್ ಖಾನ್**—(**ನೋಡಿ**) ಎಲ್ಲಿ ? ಎಲ್ಲಿ ? ಆಗಲೇ ಮಾಯವಾದನೇ ? ಇಲ್ಲಿ ಕಾಣುವುದೇ ಇಲ್ಲವಲ್ಲಾ! ಬನ್ನಿ, ದೇವಾಲಯವೆಲ್ಲವನ್ನೂ ಶೋಧಿಸಿಬಿಡೋಣ.

(**ಶಿವಾಜಿಯು ಕುದುರೆಯನ್ನೇರಿ ಮಹಾದ್ವಾರದಲ್ಲಿ ಓಡಿಹೋದಂತೆ ಕಾಣುವುದು.**)

**ಇಬ್ಬರೂ**—ಅದೋ! ಅದೋ! ಕುದುರೆಯನ್ನೇರಿ ಓಡುತ್ತಿರುವನು! ಬನ್ನಿ, ಬನ್ನಿ! ಹಿಂದಟ್ಟಿ ಹಿಡಿಯೋಣ! ಎಲವೋ ಪಿಶಾಚೀ, ಈಗ ನಿನ್ನನ್ನು ಹಿಡಿಯದೆ ಬಿಟ್ಟೇವೇ! ಆಗಲಿ. (**ಅಟ್ಟಿಕೊಂಡು ಹೋಗುವರು.**)

**ಶಿವಾಜಿ**—ಆಹಾ! ಪರಮಾತ್ಮಾ! ನಿನ್ನ ಲೀಲೆಯನ್ನೂ ಮಹಿಮೆಯನ್ನೂ ಬಣ್ಣಿಸಲು ಯಾರಿಗೆ ತಾನೆ ಸಾಧ್ಯವು! ಬ್ರಹ್ಮಾದಿ ದೇವತೆಗಳನ್ನೂ ಮಹರ್ಷಿಗಳನ್ನೂ ವಿಚಿತ್ರ ಲೀಲೆಗಳಿಂದ ಬೆರಗುಮಾಡಿದ ನಿನ್ನ ಮಹಿಯು ಅದ್ಭುತವಾದುದು! (**ತುಕಾರಾಮನನ್ನು ನೋಡಿ**) ಗುರು ಮಹಾರಾಜಾ! ತಮ್ಮ ಶಕ್ತಿಯೂ ತಮ್ಮ ಕೀರ್ತನ ಮಹಿಮೆಯೂ ಸಹ, ಈ ದಿನ ನಮಗೆ ಒದಗಿದ್ದ ಆಪತ್ತನ್ನು ನಿವಾರಿಸಿ ಕಾಪಾಡಿದವು.

**ತುಕಾರಾಮ**—ಮಹಾರಾಜಾ! ಇದು ನನ್ನ ಕೀರ್ತನ ಮಹಿಮೆಯೂ ಅಲ್ಲ, ನನ್ನ ಶಕ್ತಿಯೂ ಅಲ್ಲ. ನಿರ್ಮಲ ಚಿತ್ತದಿಂದ ಧರ್ಮ ಮಾರ್ಗ ಪ್ರವರ್ತಕನಾಗಿ ವಿಠಲಮೂರ್ತಿಯನ್ನು ಒಲಿಸಿರುವ ನಿನ್ನ ಭಕ್ತಿ ಸಾಮ್ರಾಜ್ಯದ ಮಹಿಮೆಯು.

**ಪಂಡಿತರಾವ್**—ದೇವಾ! "ನಾ ವಿಷ್ಣುಃ ಪೃಥಿವೀ ಪತಿಃ" ಎಂಬ ತತ್ತ್ವವು ತಮ್ಮಲ್ಲಿ ಪ್ರತ್ಯಕ್ಷವಾಗಿರುವುದರಿಂದಲೇ ವಿಠಲಮೂರ್ತಿಯೇ ಛತ್ರಪತಿ ಮಹಾರಾಜನಾಗಿ ಈ ದಿನ ಗೋಚರನಾದನು. ಈ ದಿನ ತಮ್ಮ ಆಗಮನದಿಂದ ನಮ್ಮೆಲ್ಲರಿಗೂ ಸಾಕ್ಷಾತ್ಪಾಂಡುರಂಗ ಮೂರ್ತಿಯ ಅನುಗ್ರಹವು ಒದಗಿದಂತಾಯಿತು.

**ಎಲ್ಲರೂ**—ಸಂದೇಹವೇನು! ಸಂದೇಹವೇನು!

**ತುಕಾರಾಮ**—ಇನ್ನು ವಿಪತ್ಪರಿಹಾರಕನೂ ಸಂಪತ್ಪ್ರದಾಯಕನೂ ಆದ ಶ್ರೀ ಪಾಂಡುರಂಗ ವಿಠಲನನ್ನು ಭಜಿಸಿ ಕೀರ್ತನವನ್ನು ಪೂರಯಿಸಿ ಮಂಗಳವನ್ನು ಪಡೆಯೋಣ.

**ಎಲ್ಲರೂ**— (ಇಳ)

**ಕಂ॥** ಮಂಗಳಮಂಬುಧಿ ತನುಜಾ।
ಸಂಗತ ನವಲೀಲ ವಿಮಲ ಕೌಸ್ತುಭಮಾಲಾ॥
ತುಂಗ ಕೃಪಾರಸಪೂರ್ಣಾ।
ಪಾಂಗ ಶ್ರೀ ಪಾಂಡುರಂಗ ಮಂಗಳ ನಾಮಾ॥

**॥ ಭರತ ವಾಕ್ಯಂ ॥**

**ಚಂ॥** ಸುರಿಯೆ ಸಕಾಲವೃಷ್ಟಿ ಯಿಳೆ ಸತ್ಫಲಮಂ ತಳೆದಿರ್ಕೆ ಧರ್ಮದಿಂ।
ಪೊರೆಗೆ ಧರಿತ್ರಿಯಂ ಜನಪ ರಾಜನಮೀಶ ಕಥಾಳಿ ಕೀರ್ತನಾ॥
ದರರೆನಿಸಿರ್ಕೆ ಸತ್ಕವಿಜನಂ ಹರಿಭಕ್ತ ಚರಿತ್ರ ಕೋಟಿಯಂ।
ವಿರಚಿಸಿ ಪಾಂಡುರಂಗ ಕೃಪೆಯಿಂ ಮಿಗೆ ತಾಳುಗಭೀಷ್ಟಸಿದ್ಧಿಯಂ॥

**ತೃ ತೀ ಯಾ ಂ ಕ ಂ**

ಸಂಪೂರ್ಣಂ

---

**ಕಂ॥** ವರ ರಕ್ತಾಕ್ಷಿಲಸದ್ವ।
ತ್ಸರದಾಶ್ವಯುಜಾದಿಪಕ್ಷ ದಶಮಿ ಬುಧವಾ॥
ಸರದೊರೆದಂ ನರಹರಿ ಕವಿ।
ಮೆರೆವ ತುಕಾರಾಮ ಚರಿತ ನವ ನಾಟಕಮಂ॥

# ತುಕಾರಾಮ ನಾಟಕಂ

ಸಂಪೂರ್ಣಂ

ಶ್ರೀ ಕೃಷ್ಣಾರ್ಪಣಮಸ್ತು.

---

# ಸಾಧು ತುಕಾರಾಮ
## (ಅನುಬಂಧ)

---

### ನಾಂದಿ

ಪುಟ ೧ ೧ ರಾಗ ಅಠಾಣ — ರೂಪಕತಾಳ (ನಾರದ ಗಾನಲೋಲ)

ಸೂತ್ರಧಾರ—ಶ್ರೀವರ ಗಾನಲೋಲ | ಶ್ರಿತ ಸುರಮುನಿ ಪಾಲ ||ಪ||
ಪಾವನ ಘನ ಲೀಲ | ಪರತರ ಶುಭ ಶೀಲ ||ಅ||
ದೇವ ದೇವ ಸಂ | ಸೇವಿತ ಪದ ಕಮಲ | ಸುವಿಮಲ ||
ಭೂವರಾಳಿ ಸಂಪೂಜಿತ | ಪೂತ ಪದಾಂಬುಜ ಯುಗ ||
ಭಾವಜಾತ ಕೋಟಿರೂಪ | ಪಾಲಯ ನೃಹರೀಶ ಕೃಷ್ಣ ||೧||

ಪುಟ ೨ ೨ ರಾಗ ಕಮಾಚ್ — ಆದಿತಾಳ

ನಟ—ಮುದಮೀವುದು | ಮಧು ಮಾಸವಿಂತು ||ಪ||
ಸುದತೀ ಸುಖ ಸಂ | ಪದವಾಗಿರೆ ||ಅ||
ಮಲ್ಲಿಕಾದಿ ನಾನಾ | ಫುಲ್ಲ ಸೂನ ಜಾಲಂ || ಚೆಲ್ಲಿ ಸೌರಭವ | ನೆಲ್ಲಿಯೂ ರಂಜಿಸೆ ||೧||
ಬೆಳದಿಂಗಳೊಳ್ | ನಳಿನಾಕ್ಷಿಯರು || ನಲಿದಾಡಿ ನೀರ | ರೊಳು ಲೀಲೆಯಾಡಲ್ ||೨||

ಪುಟ ೩ ೩ ರಾಗ ಮೋಹನ — ಆದಿತಾಳ

ಶಿವಾಜಿ—ಗುರುವರ ಮಹಿಮೆಯು | ನೋಡಲನಂತವು | ಪರತರ ಸುಖದ ನಿಧಾನ ||ಪ||
ಪಾಪ ನಿಕರವನು ದಹಿಸಿ | ತಾಪ ನಿಕಾಯವ ಜಯಿಸಿ | ಶ್ರೀಪತಿ ಪಾದವ ತೋರ್ಪ ||೧||
ಹೃದಯದ ತಮವದು ಪಾರೆ | ಸದಮಲ ತೇಜವು ತೋರೆ | ಬುಧನುತ ಪದವಿಯನೀವ ||
ಭವ ಭಯಕಾನನ ಕೀಲ | ಅವಿದಿತಾನಂದ ವಿಶಾಲ | ಪ್ರವರ ಪದವಿಗದು ಮೂಲ ||೩||

ಪುಟ ೩ ೪ ರಾಗ — ಆದಿತಾಳ

ಸಯಿಾಬಾಯಿ—ಗುರುನಾಥ ಪಾದಸೇವೆ | ಕಾಂತಾ ||ಪ||
ಪರಮ ವಿಭವಸಾರ | ನೀರ ||ಅ||

ಪರಲೋಕಾನಂದವ | ಧರಣಿಯೊಳಗೆ ಮುದವ | ಕೊಡುವ ||೧||
ಗುರುವಂ ನಾಂ ಸೇವಿಸಿ | ದುರಿತವಳಿದು ತಳೆವ | ಶುಭವ ||೨||

ಪುಟ ೬ ೫ ರಾಗ — ಆದಿತಾಳ

ಮಂಬಾಜಿ ಮತ್ತು ಅವನ ಶಿಷ್ಯರು—
ಆಂಜನೇಯ ನಿ | ನ್ನಡಿಗಳಿಗೆರಗುವೆ | ಮಂಜುಳ ರವಿ ತೇಜಾ ||
ಪವನಜಾ | ಗುರುರಾಜಾ ||ಪ||
ವಿಮಲ ಚರಿತ | ವಿಶ್ವ ವಿನುತ | ಶಮಿತ ನತ ದುರಿತ ||
ಮಿಮತ ಭೀಮಾ | ವಿಜಿತ ಕಾಮಾ | ವಿಲಸಿತ ಗುಣಧಾಮಾ | ಸುಮಹಿಮಾ ||೧||

ಪುಟ ೬ ೬ ರಾಗ — ಮಾಲ್‌ಕೌಸ್ — ಅಟತಾಳ ಚಾಪು

ತುಕಾರಾಮ
ಕಾಶೀಬಾಯಿ
ಮಹಾದೇವ

ಚಿದಾನಂದ ಗೋವಿಂದ | ಶ್ರೀವಲ್ಲಭಾ ||ಪ||
ಸದಾ ನಿರ್ಜರಾಧಾರ | ಸಾಂದ್ರ ಪ್ರಭಾ ||ಅ||

ದಿನಾಧೀಶ ಸಂಕಾಶ ತೇಜೋಮಯ | ಮುನೀಂದ್ರಾಳಿ ಸನ್ಮುಕ್ತಿ ಭಾಗ್ಯೋದಯ ||೧||
ಜನಿತ್ರಾಣ ಸಂಹಾರ ಕಾರ್ಯಾದರ | ಅನಂತಾವತಾರ ನೃಸಿಂಹಾಪರ ||೨||
ತ್ರಯೀಶೀರ್ಷ ಸಂಗೀತ ಲೀಲೋಜ್ವಲ | ದಯಾ ಪೂರ್ಣ ಮಾಂಪಾಹಿ ಶ್ರೀ ವಿಠ್ಠಲ ||೩||

ಪುಟ ೯ ೭ ರಾಗ — ತಾಳ

ತುಕಾರಾಮ—ಆಶ್ಚರ್ಯವೇನಿದು | ಪುರಾತನಾತ್ಮ | ಪಿರಿದನುಭವವಾಂತಿರೆ ||ಪ||
ಜಿಜಾಬಾಯಿ—ಈ ಚರ್ಯವೇನಿದು | ಬಿಡಿ |
ವಿಚಿತ್ರಮಾಯ್ತು ಹರಿಭಜನೆಯ ಕಾಟವು ||ಪ||
ತುಕಾರಾಮ—ಆದಿಯಂತಗಳ | ಭೇದವಿಲ್ಲದಿಹ ಮೋದ ಭರಿತನಹ |
ಮುರಹರ ಮಹಿಮೆಯೊಳಾ ||ಅ||
ಜಿಜಾಬಾಯಿ—ಸಾರಿ ಬಂದ ನಿಜ | ನಾರಿಯನ್ನು ಮಿತಿ | ಮಾರಿಯುಳಲಿಸುತೆ |
ಪರಿಪರಿ ನುಡಿಯುವ ||ಅ||
ತುಕಾರಾಮ—ಏನಿದೇನಿದನು | ಮಾನ ರಮಣಿ ಬಲು | ದೀನರಾದ ನಮಗೆ ||
ಜ್ಞಾನ ನಿಧಿ ದೇವ | ಸಾರಸುಖವ | ಸಾರಿ ಕುಡುವ ||
ನೀನವನ | ಧ್ಯಾನಮಾಡು ಕಾಂತೇ ||

ಶುಭಾ ಕಲಿತೇ | ಪ್ರಭಾ ಲಲಿತೇ | ಗುಣಾಂಚಿತೆ || ಜ್ಞಾನವ | ನೀಡುವ |
ಜಾಹ್ನವಿ ಜನಕನ | ಜಪಿಸೆಲೆ ನಾರೀ | ಸುಪಥವ ಪಿಡಿಯುತಲಾ ||೧||
ಜಿಜಾಬಾಯಿ—ಮೀರಿದ ಬಡತನದಿ | ಸಿಲುಕಿ ಸುಖ | ಸಾರವ ಕಾಣದೆ ನಾಂ ||
ಬಳಲುತಿರೆ | ದಾರಿಯ ತೋರದೀತೆರಂ | ವಿರಸದಿ |
ವಿರೋಧವನು ನೀಂ | ವಿರಚಿಸಿ ನುಡಿವರೆ ||೧||

ಪುಟ ೯ ೮ ರಾಗ— ಆದಿತಾಳ (ಜನಿಯ ಹಾಡು)

ಮಂಬಾಜಿ—ಹೇಮ ತೇಜೋ | ಧಾಮ ಸೀತಾ | ರಾಮ ಪದ ಭಜನಾ ||
ಅನಘ ಶೀಲ | ದನುಜ ಕಾಲ | ಮುನಿಕುಲ ನುತಲಿಲ | ಸುವಿಮಲ ||೨||

ಪುಟ ೧೧ ೯ ರಾಗ ನಾಟಕುರಂಜಿ — ಅಟತಾಳ ಚಾಪು

ತುಕಾರಾಮ—ಪಾಮರ ನಾದೆನ್ನ | ಪಾಪವ ಮನ್ನಿಸು | ಪಾವನ ಗುಣಸದನಾ ||
ನತ ಸುಜನಾ ||ಪ||
ಸಾಧುಪುಂಗವ ನಿತ್ಯಾ | ಮೋದದಿಂದಹ ನೀವು | ಭೇದವನೆಣಿಸುವರೇ | ಸಾಧಿಪರೇ ||
ಪಾದಪಂಕಜಗಳ | ನಾದರದಿಂ ಪಿಡಿವೆ | ಶ್ರೀಧರಯುತ ಹೃದಯಾ | ನೀಂ ಸದಯಾ ||೧||

ಪುಟ ೧೭ ೧೦ ರಾಗ — ನಾದನಾಮಕ್ರಿಯಾ — ಆದಿತಾಳ

ತುಕಾರಾಮ—ಜಗದ ಸಂಸಾರವಿದು | ನೋಡೆ | ಹೆಗಲನೇರಿ ಬಂದ ಪಾಪದ
ಫಲವಾಹಾ ||ಪ||
ಸುದತಿ ಸೂನುಗಳಲ್ಲಿ | ಸುಖಪಡಬಹುದೆಂದು | ಮದುವೆಯ ಮಾಡಿಕೊಂಡಾದರದಿ ||
ವಿಧವಿಧ ಕಷ್ಟಗ | ಳೊದಗಿರೆ ಪಾವನ | ಮಧುರಿಪು ನಾಮವ | ಮರೆತು ದುಃಖಿಸುವುದೆ||೧||
ಆರ ದೂರಮಾಡಿ | ಮೂರರೊಳೊಂದಾಗಿ | ಸೇರಿರುವ್ಯೆವರ ನಡಿಗಿಸುತ || ದಾರಿಯೊಳ
ಿಹ ತಮ | ವಾರಿಸೆ ಬೆಳಕನು | ತೋರುವುದೇ ತುಕಾರಾಮನ ಮತವದು ||೨||

ಪುಟ ೧೮ ೧೧ ರಾಗ — ಜಂಜೂಟಿ — ರೂಪಕತಾಳ

ಜಿಜಾಬಾಯಿ—ಕಾಂತ ಲಾಲಿಸು ನನ್ನ ಮಾತ | ಶಾಂತನಾಗುತೆ | ಸಾರು ನೀ |
ನಿಂತು ಮನೆಗೆ ||ಪ|| ನಿನ್ನಾಜ್ಞೆಯನ್ನು ನಾಂ | ಮಾನ್ಯನೇ ಕೇಳ | ಮುನ್ನಮೆ ನಡೆಯಿಪೆ |
ನಿನ್ನು ತೆರಳು ||೧||
ಕಾಶಿ, ಮಹಾದೇವ—ಕಾಶ ಲಾಲಿಸು | ನಮ್ಮ ಮಾತ | ಪ್ರೀತಿಯಿಂದಲಿ | ಸಾರು ನೀಂ |

ನೀತಿವಿದನೆ ||ಪ|| ಬೇಡುವ ನಮ್ಮನು| ನೋಡುತ ನೀನು| ಕಾಡದೆ ಬರುವುದು| ಕೊಡಿ ಮುದವ ||೨||

ಪುಟ ೨೨ ೧೨ ರಾಗ — ಏಕತಾಳ

ತುಕಾರಾಮ—ಪಾಲಯಮಾಂ ಯದುಬಾಲ| ನವಲೀಲ| ರಿಪುಕಾಲ|| ಶುಭ ಶೀಲ| ಬಾಲ ||ಪ||

ಭುವನ ಭರಣ ಬೃಂದಾವನ ಲೀಲ | ವಿವಿಧ ನಾಟ್ಯ ಸುವಿಲೋಲ || ನತಪಾಲ| ಘನ ಶೀಲ| ವನಮಾಲಾ| ಭೂಷ ||೧|| ಜನನ ಭರಣ ಲಯ ಕಾರ್ಯ ವಿನೋದ| ವಿನತ ಮೌನಿ ಕೃತಮೋದ || ಗುಣಸೌಧ| ಶುಭಪಾದಾ| ಶ್ರಿತರಾಧಾ| ನಂದ ||೨||

ಪುಟ ೨೩ ೧೩ ರಾಗ — ಆದಿತಾಳ

ತುಂಬಾಜಿ ಮೊದಲಾದ ಶಿಷ್ಯರು—

ವಾಯುವರ ತನೂಜ ವಿಜಿತ| ಮಾಯ ವಿಜಯ ರಿಪುಜಯ ||ಪ||
ಚರಣ ಕಮಲ| ಶರಣ ದುರಿತ| ಹರಣ ನಿಪುಣ ವರಗುಣ ||ಅ||
ಗಾನನಿಪುಣ| ದೀನಶರಣ| ಜ್ಞಾನಿಮುಕ್ತಿ ಕಾರಣ ||
ವಿನತ ಭರಣ| ವನಧಿ ತರಣ| ದನುಜನಿಕರ ಮಾರಣ ||೧||
ರಾವಣಪುರ| ದಾವ ವಿಮಲ| ಭಾವ ಸುಜನ ಪಾಲನ ||
ವರ ರಘುಪತಿ| ಚರಣ ವಿನುತಿ| ನಿರತ ನೃಹರಿ ನುತಪದ ||೨||

ಪುಟ ೨೫ ೧೪ ರಾಗ ಹಿಂದೂಸ್ಥಾನಿ — ಆದಿತಾಳ

ರಂಭೆ—ಮೊರಸುಖ ಸೌಭಾಗ್ಯ ಲೀಲಾ ವಿಲಾಸ| ಮೋದಕರ|
ಸುವಿನೋದಾಕರ| ಸುಮಬಾಣಾತಳ ಪ್ರಾಣಪ್ರದಾನ ||ಪ||
ಶೃಂಗಾರ ಲೀಲೆಗೀ| ಅಂಗನಾ ಪಾಂಗವೇ| ತುಂಗ ಸನ್ಮಂಗಳಾಚರಣವು ||
ಸುಂದರ ಕಾಮಿನಿಯ| ಸುರುಚಿರ ಹಾಸಮಯ || ಬಂಧುರ ಲೀಲೆ ಜಯ|
ಮೊಂದಿಪುದಾ ಸುಖಿಯು| ಕಳಾ ಸಮರಸ ಭಾವದೆನಿಂದು ||೧||

ಪುಟ ೪೧ ೧೫ ರಾಗ ಹಿಂಸ್ಥಾನಿ — ಏಕತಾಳ

ರಂಭೆ—ಮುದದಿ ಪೋಪೆ| ನಿದೋ ನಾನೊಲವಿಂ ||ಪ||

ಕಾಮಬಾಣ ಬೀರಿ ತುಕಾ। ರಾಮನನ್ನು ನಾಂ ॥
ಸಾಮದಿಂದ ಗೆಲ್ಲಲೀಗ। ನೇಮವಾಂತು ॥೧॥
ಗಾನ ನಾಟ್ಯಲೀಲೆಯಿಂದ। ಜ್ಞಾನಭಂಗವ॥
ಮೌನಿಯಾದರಿಂದುಮಾಡಿ। ನಾನು ಬಂದಪೆನಿದೊ ॥೨॥

ಪುಟ ೫೦ ೧೬ ರಾಗ — ಆದಿತಾಳ

ತುಕಾರಾಮ—ಜಯ ಕಮಲಾ ಪರಮಾನಂದ ।
ಜಯಜಯ ವಿಠ್ಠಲ ಗೋವಿಂದ ॥ಪ॥
ಶ್ರೀ ಯದುಕುಲ ವನಮಾಕಂದ। ತೋಯಜ ಲೋಚನ ಗೋವಿಂದ ॥೧॥
ದೇವಕೀ ವಸುದೇವಾನಂದ। ದೇವೇಂದ್ರಾರ್ಚಿತ ಗೋವಿಂದ ॥೨॥
ಲೀಲಾಮಯ ಬಾಲಮುಕುಂದ। ನೀಲಾಂಬುದ ರುಚಿ ಗೋವಿಂದ ॥೩॥
ಮಂದಹಸನ ಜಿತ ನವಕುಂದ। ಸುಂದರ ಶುಭಕರ ಗೋವಿಂದ ॥೪॥
ಪಾವನ ನಿತ್ಯ ನಿಜಾನಂದ। ಗೋವರ್ಧನಧರ ಗೋವಿಂದ ॥೫॥
ಪಾದ ವಿಧೇಯ ಶತಾನಂದ। ಪಾಪ ವಿಮೋಚನ ಗೋವಿಂದ ॥೬॥
ತುಕಾರಾಮ ಮತ್ತು ಶಿವಾಜಿ—
ಸಕಲ ಸುಗುಣ ಲೀಲಾಕಂದ। ಸುಕರ ಶುಭಾಕರ ಗೋವಿಂದ ॥೭॥
ಚರಣಾನತ ಸುರಮುನಿ ಬೃಂದ। ತರುಣಾರ್ಕ ಪ್ರಭ ಗೋವಿಂದ ॥೮॥
ನಂದಸುತ ಯಶೋದಾನಂದ। ಮಂದರ ಗಿರಿಧರ ಗೋವಿಂದ ॥೯॥
ವರ ಪರಿಪೋಷಿತ ಮುಚುಕುಂದ । ನರಹರಿ ಪೂಜಿತ ಗೋವಿಂದ ॥೧೦॥

ಪುಟ ೬೫ ೧೮ ರಾಗ — ತಾಳ

ಸಾಧು ಜನಾವನ ಶೀಲ। ಭೂಮಿಪಾಲ ॥ಪ॥
ಪಾವನ ಗುರುವ। ಸೇವಿಸೆ ನಡೆದ। ಭೂವರನ್ಯಾರನೇಕೆ। ದೇವಾ ॥೧॥
ಮಾನಿತ ಬಂದು। ಮಾನನಿಗೆಂದು । ಮಾನಸ ಮೋದವ ನೀವ । ದೇವ ॥೨॥

ಪುಟ ೬೭ ೧೯ ರಾಗ — ವಸಂತ — ಅಟತಾಳ ಚಾಪು

ಶಿವಾಜಿ—ಆನಂದಕಾದಿಕಾರಣ ನಾ ಗುರೂತ್ತಮನು।
ಘನ। ಜ್ಞಾನದಾಯಕನು । ಕರುಣಾನಿಧಾನ ॥ಪ॥

ಅರಿಗಳನು | ಹರಿಸುತಲಿ | ಪರಮ ಪದವನು ತೋರ್ಪ ||
ಪರಮೇಶ್ವರಾಕಾರ | ಪಾಪ ಪರಿಹಾರ ||೧||

ಪುಟ ೬೯ ೨೦ ರಾಗ ಅಸಾವೇರಿ — ಅಟತಾಳ ಚಾಪು (ರಾವುಪರವಾ)

ಸಯಿಾಬಾಯಿ—ಪಾದ ಪಿಡಿವೆ | ಪಾಲಿಸು ನಾಥಾ | ಪೂತಾ | ಸುವಿಖ್ಯಾತಾ ||ಪ||
ಏನಿಂತು ವೈರಾಗ್ಯ | ವಿದು ವೀತಭಾಗ್ಯ ಮೌನೀಂದ್ರಯೋಗ್ಯಜ | ನಾನಂದ ಪ್ರಾಜ್ಞ || ೧||
ಧೀರಾ ಜನಾಧಾರ | ನೀರಾ ಉದಾರ | ಈ ರೀತಿಯೇಕೆ ಘು | ನಾರಣ್ಯವಾಸ ||೨||

ಪುಟ ೬೯ (ಮೇಲಿನಿಂದ ೧೩ ನೆಯ ಪಂಙ್ಕ್ತಿ) ರಾಗ — ತಾಳ

ಸಯಿಾಬಾಯಿ—ಪ್ರಿಯ | ರಮಣ ಚರಣ | ಕಮಲ ಯುಗಕೆ | ನಮಿಸಿ ಬಳಲಿ |
ಬೇಡುವೆ ಪ್ರಿಯಾ ||ಪ||
ನಾಥ ನಿನ್ನನಗಲಿ ಕಾಂತೆ | ಕಾತರಿಸಿರಲಿಂತು | ಮಾತಾಡಿ |
ಪ್ರೀತಿಸದೆ | ಸ್ಮಿತಿಹುದೇಂ ತರವೇ ||ಅ||
ಶಿವಾಜಿ—ಬಿಡು | ತರುಣಿ ಮನದ | ತರಳತೆಯನು | ತೆರಳು ಮನೆಗೆ ಕಾಡದೀಪರಿ ||ಪ||
ಶೋಕ ಮೋಹ ಭರಿತಮಾದ | ಲೋಕದೊಳಗೆ ಸೌಖ್ಯ | ಸಾಕಿನ್ನು |
ಸಾಧ್ವಿಯೆ ನೀಂ | ವ್ಯಾಕುಲವಂ ನೀಗು ||ಅ||
ಸಯಿಾಬಾಯಿ—ನೃಪ | ನಾಗಿ ಮಹಾವೈಭವ ಘನ | ಭಾಗ್ಯ ಸುಖಂನೀಗಿ ||
ಯೋಗಿಯ ತೆರ | ನಾಗಿ ಸತಿಯ | ತ್ಯಾಗ ಗೈವುದೆಂತು ||೧||
ಶಿವಾಜಿ—ಘನ | ಭೋಗ ಭಾಗ್ಯ | ಮಿಾಗಳದುವೆ | ರೋಗಮೆನಿಸಿತೆನ್ನೊಳ್ ||
ಆಗದು ನಡೆ | ತ್ಯಾಗಮೆಸಗಿ | ಯೋಗಿಯಾದೆ ನಾನು ||೧||

ಪುಟ ೭೦ (೨೦ನೆಯ ಪಙ್ಕ್ತಿ) ರಾಗ — ತಾಳ

ಸಯಿಾಬಾಯಿ—ಪ್ರಾಣಕಾಂತಾ, ಗತಿಯೇನೂ | ಕಾಣೆನಕಟಾ ಹಾ! ಪ್ರಿಯಾ ||ಪ||
ನಮಿಸುತೆ ಬೇಡಿದರೂ | ನಾಥನೆ ಈ ವೈರಾಗ್ಯ ||
ನಿಮಗಿನ್ನು | ಸಾಕು ದೇವ | ಸಾರ ವಿಭವಾ ಹಾ! ಪ್ರಿಯಾ ||೧||
ಕರವಿಡಿದಾಪ್ತ ನಿಜ | ಕಾಮಿನಿಯಂ ನೀನಿಂತು ||
ತೊರೆದೀಗ | ಸಾರಲೇಕೆ | ಕ್ರೂರತನದೆ ಹಾ ಪ್ರಿಯಾ ||೨||

ಪುಟ ೭೩ ೨೦ ರಾಗ — ಧನ್ಯಾಸಿ — ಆದಿತಾಳ

ತುಕಾರಾಮ—ರಾಮಕೃಷ್ಣ ಹರಿ ವಿಠ್ಠಲ ಜಯಜಯ।
ರಾಮಕೃಷ್ಣ ಹರಿ ಗೋವಿಂದ ||ಪ||
ಕಾಮ ಮೋಕ್ಷ ಸಂದಾತ ಸನಾತನ। ಶ್ರೀ ಮಹಿಮಾಕರ
ಗೋವಿಂದ ||ಅ||
ತಾಮರಸಾಪ್ತ ಸುಧಾಕರ ಹುತವಹ' ಧಾಮ ಸದ್ಗುಣಾ । ರಾಮ ಹರೇ ||
ಸೀಮಾತೀ। ತಾಶ್ರಿತ ವರದಾತ। ಸ್ವಾಮಿ ಇಂದಿರಾನಾಥಾ ||೧||

ಪುಟ ೭೫ ೨೨ ರಾಗ — ಬೇಹಾಗ್ — ಆದಿತಾಳ

ರಂಭೆ—ವಾರನಾರಿ। ಸುಂದರ। ಮೋದಕಾರೀ ||ಪ||
ಮಿಂಚುವ ಪಾಂಗದಿ। ಪಂಚಶರನ ಶರ। ಸಂಚಯ ಮೆರಚುತ। ಸಾಧುವ ಮನವ
ಚಂಚಲ ಮೆಸಗುವೆ । ಚತುರತೆಯೊಳು ನಾಂ ||೧||
ಕಲ ಮೃದು ಗಾನದಿಂ। ಸುಲಲಿತ ನಾಟ್ಯದಿಂ। ವಿಲಸಿತ ಭಾವ ವಿಲಾಸಗಳಿಂದಂ ।
ಸೆಳೆಯುತ ಮನವನು। ಗೆಲುವೆನು ನಲಿವೆನು ||೨||

ಪುಟ ೭೫ ೨೩ ರಾಗ — ಹಿಂದುಸ್ಥಾನಿ — ಆದಿತಾಳ

ರಂಭೆ—ಧೀರ ಭೋಗಾನಂದ ಲೋಲಾ । ಕಾಮಸಲ್ಲಿಲಾ । ನಿಧೀ ||ಪ||
ಮಾರ ದಿವ್ಯಾ। ಕಾರ ಭವ್ಯ' ಸಾರು ಸೌಖ್ಯಾನಂದಕೆ ||ಅ||
ಅಂಗನಾ ಸಾ। ರಂಗಲೋಲಾ। ಪಾಂಗ ಮೋಹಾನಂದಿತ ||
ಭಂಗ ಮುಳಿದು। ತುಂಗ ಸುಖವ । ಪೊಂಗಿಸ್ಯೆ ಲೀಲಾನಿಧೀ ||೧||

ಪುಟ ೮೩ ೨೪ ರಾಗ — ದೇಶಿತೋಡಿ — ಆದಿತಾಳ

ರಂಭೆ—ಹರಿಹರಿ ! ನಾನಿಂದತಿ ಪಾಪಿಯು। ಗುರೂತ್ತಮ ನಿಮ್ಮನೆ ಪೀಡಿಸಿ ||ಪ||
ನಾನಾ ವಿಧದಿಂದೆ ನಾನೀ ತೆರಂ। ಶ್ರೀನಾಥ ಭಕ್ತಾಗ್ರಣಿಯಾಗಿಹ।
ಜ್ಞಾನ ಪ್ರಧಾನರ ಪೀಡಿಸಿದೆ ||೧|
ಲಾವಣ್ಯದಿಂ ಮತ್ತಳಾಗುತ್ತ ನಾಂ। ಏವೇಳ್ವೆ ಮುಂಗಾಣದೀ ರೀತಿ
ಯೊಳ್। ಭಾವಜ್ಞರೆ ನಿಮ್ಮನು ಪೀಡಿಸಿ ||೨|

ಪುಟ ೮೪ ೨೫ ರಾಗ — ಆದಿತಾಳ

ಮಂಬಾಜಿ—ಮಹಿಯೊಳು ನಾನೇ। ಮಾನ್ಯನಾಗುವೆ। ನಾಹಾ ||ಪ||
ದುರ್ಮದಾಂಧನ। ತುಕಾರಾಮನ । ಮರ್ಮ ಭೇದಗೈವೆ ||
ಧರ್ಮಶೀಲ ನಾ। ನೆಂಬ ಕೀರ್ತಿಯ । ಪೆರ್ಮೆಯಿಂದ ಮೆರೆವೆ ||೧||

ಪುಟ ೮೫ ೨೬ ರಾಗ — ಆದಿತಾಳ

ರಂಭೆ—ಶ್ರೀಲೋಲ ಪಾಹಿ ನವಲೀಲ ವನಮಾಲಾಧರ ||
ಘನ ಲೀಲ ಗೋಪಾಲ। ಜ್ಞಾನ ಪ್ರದಾನ ಶೀಲ ||ಪ||
ಗೀತ ನಾಟ್ಯಾದಿ ಲೋಲ। ಗೀರ್ವಾಣಜಾಲ ಪಾಲ || ಶ್ರಿತಪಾಲನ ಶ್ರೀ
ಜಗನ್ನಾಥ। ಸಿಂಧು ಗಂಭೀರ ಪೂತ। ಶ್ರೀ ತುಕ್ಕಾರಾಮ ಗೀತ ||೧||

ಪುಟ ೯೧ ೨೭ ರಾಗ -- ಆದಿತಾಳ

ಜಿಜಾಬಾಯಿ—ಅಂಬೇ ಪಾಹಿ। ಜಗದಂಬೇ ಪಾಹಿ।
ಬಂಭರಕದಂಬ ವೇಣಿ ದೇವಿ ಪಾಹಿ ||೧||
ತುಂಗಲೀಲೇ ರಿಪು। ಸಂಘಕಾಲೇ ಮಂಗಳಾಂಗಿ ಶಂಕರಾ। ರ್ಧಾಂಗಿ ದೇವೀ ||೧||
ಪಾಲಿಸೆನ್ನ ಮುದ್ದು। ಬಾಲನನ್ನು। ಕಾಲಿಗೆರಗಿ ಬೇಡುವೆನು। ಕಾಳಿ ನಿನ್ನ ||೨||

ಪುಟ ೯೫ ೨೮ ರಾಗ — ಆದಿತಾಳ

ತುಕಾರಾಮ—ಶ್ರೀಲೋಲ ಗೋಪಾಲ ಪಾಹಿ ವಿಠ್ಠಲ
ಹೇ ಬಾಲ ಗೋಪಾಲ ಪಾಹಿ ವಿಠ್ಠಲ ||ಪ||
ಮಂಜುಳ ಗಾನಲೋಲ। ಕುಂಜರ ರಾಜಪಾಲ || ಕಂಜಾಕ್ಷ ದೈತ್ಯಾಳಿಭಂಜನಹರೇ ||೧||
ಕೀರ ಲಲಿತಾಲಾಪ। ಹೀರಮಣಿ ಸುಕಲಾಪ || ಶೌರೇ ಸದಾನಂದ। ಸಾರವಿಠಲ ||೨||

ಪುಟ ೯೬ (ಪಜ್ಯ್ಕ ೧೮) ರಾಗ— ತಾಳ

ಸಯೀಬಾಯಿ—ಪಾಲಿಸೈ। ದೇವನೇ। ಲಾಲಿಸೆನ್ನ ಮೊರೆಯನು ||ಪ||
ಕಾಂತನೆನ್ನ ನೋಡದೆ। ಇಂತರಣ್ಯ ಕೈದಿರೆ
ಭ್ರಾಂತಳಾದೆ ನಕ್ಕಟಾ। ಶಾಂತರೂಪ ಪಾಲಿಸೈ|| ೧||

ಪುಟ ೯೭  ೨೯ ರಾಗ — ತಾಳ

ಸಯಿರಾಬಾಯಿ—ದಯವ ತೋರ್ರೈ | ಸುಯಶೋ ವಿಕಾಸ | ಪ್ರಿಯ ರಮಣಾ ||ಪ||
ತನು ಮನವೆಲ್ಲವಂ | ಇನಿಯನೆ ನಾನು | ವಿನಯದೊಳಿರಿಸಿದೆ | ನನಿಶವು ನಿನ್ನೊಳ್ ||
ವನಿತೆಯಿನಿತು ಚೀರಿ ಕೋರೆ | ಮುನಿದು ದೂರ ಸಾರಲೇಕೆ ||೧||

ಪುಟ ೧೦೩  ೩೦ (೨೮ನೆಯ ಹಾಡು)

ತುಕಾರಾಮ—ಶ್ರೀ ವಿಥವಾನಂದ | ಪಾವನ ಗೋವಿಂದ | ದೇವಾಧಿದೇವ ಪ್ರ |
ಭಾವ ನಿಲಯ ||೧||
ಶಿವಾಜಿ—ದಾನವ ಬಾಲ ಪಾಲ | ಶ್ರೀನಾರಸಿಂಹ ಲೀಲ | ದೀನಾವನ ಪಾಹಿ |
ಜ್ಞಾನ ನಿಲಯ ||೨||

ಪುಟ ೧೦೬  ೩೧ ರಾಗ — ಸಾರಂಗ — ಅಟತಾಳ ಚಾಪು

ರಂಭೆ—ಶ್ರೀ ದೇವಕೀ ಬಾಲ | ಶ್ರೀ ಧಾರಿಣೀ ಲೋಲ |
ಶ್ರಿತ ಜನಾವನ ಶೀಲ | ಶಿರವ ಬಾಗಿಂದು ಮಣಿವೆ ||ಪ||
ವೇದಾಳಿಗೀತ ಲೋ | ಕಾದಿ ಮೂಲಾನಂತ | ರಾಧಾ ವಿಲಾಸಮಯ | ಯಾದವ ಶಿಖಾಮಣೀ ||ಅ|| ವಂದಾರು ಮಂದಾರ | ವನಧಿಸಮ ಗಂಭೀರ || ಬೃಂದಾರಕಾಳಿ ನುತ | ಭುವನ ಭರಿತ || ಮಂದಾಕಿನೀ ಜನಕ | ಮಂದರಗಿರೀಂದ್ರಧರ || ನಂದಾತ್ಮಜಾತ ಶ್ರೀ | ನಾರದಾರಾಧಿತ ||೧||

ಪುಟ ೧೧೮  ೩೨ ರಾಗ — ಕಾಂಬೋದಿ — ಅಟತಾಳ ಚಾಪು

ತುಕಾರಾಮ—ಆನಂದವಾಂತಿಹೆನು | ಶ್ರೀನಾಥ ನಾನು ||
ಜ್ಞಾನಿ ಗೋಚರನಾದ | ನೀನೆನ್ನನೊಲಿದೆ ||ಪ||
ಜ್ಞಾನಿಗಳ ಸಂಘದಲಿ | ನಾನೆನ್ನ ಗೀತಗಳ | ಗಾನಮಾಡುವ ಸಂಧಿ | ತಾನೊದಗಲಿಂದು ||ಅ|| ಪಾದಭಕ್ತನ ನುತಿಯ | ಮಾಧುರ್ಯವೆಂತಿಹುದೊ | ಓದಿಸುತ ಲಾಲಿಸುತ | ಮೋದದಿಂದ || ಸಾಧುರೂಪದೆ ಬಂದು | ಶೋಧಿಸಲು ಕಾವ್ಯವನು | ಆದರದೆ ನಿಂದಿರುವೆ | ಮಾಧವನೆ ನೀನು ||೧||

ಪುಟ ೧೧೪ ೩೩ ರಾಗ — ತಾಳ

ತುಕಾರಾಮ—ಗೋಪಾಲ ರಾಧಾಕೃಷ್ಣ ಗೋವಿಂದ ಗೋವಿಂದ ||ಪ||
ಭೂಪಾಲ ಜಾಲವಂದ್ಯ | ಭೂರಿ ಭೋಗಾನಂದ ||ಪ||
ನೀರೇಜಲೋಚನ | ನೀರಧರ ನೀಲ || ನೀರಾಕರಾಲಯ | ನಿರ್ಮಲ ಸುಶೀಲ ||೧||

ಪುಟ ೧೨೨ ೩೩

ತುಕಾರಾಮ—ಖಗರಾಜ ಗಮನ ಪ | ನ್ನಗ ರಾಜ ಶಯನ || ನಿಗಮಾಳಿ ಸುತ ಶ್ರೀ |
ಜಗದೇಕ ನಾಥಾ ||೨||

ಪುಟ ೧೨೪ ೩೩

ತುಕಾರಾಮ—ಬಾಧಾ ನಿವಾರಕ | ಭವ ಭಯ ಹರ || ರಾಧಾವಿಲಾಸ ವಿ |
ನೋದ ಸುಖಕರ ||೩||

ಪುಟ ೧೨೫ ೩೩

ತುಕಾರಾಮ—ಕರಿ ರಾಜದ ವರದ ಶ್ರೀ | ಕರ ಸಾಧು ಸುಖದ |
ವರ ಪಾಂಡುರಂಗ ನರ | ಹರಿ ದಿವ್ಯ ರೂಪ ||೪||

ಪುಟ ೩೪ ರಾಗ — ಮಧ್ಯಮಾವತಿ — ಆದಿತಾಳ

ಎಲ್ಲರೂ—ಜಯ ವಿಠಲ ಜಯ ಮಂಗಳಾಂಗ | ಪಯೋಜಾ ಭರಣ ಕೃಷ್ಣ ||ಪ||
ಶ್ರೀಮಂದಿರಾ | ಶ್ರಿತ ಜನಾದರ | ಸೀಮಾತೀತ | ಘನ ಮಹಿಮ ||
ಸುರಾರಾಧಿತ | ಸುವಿಮಲ ಚರಿತ | ನರಹರಿ ಮಂಗಳ ದಾನಶೀಲ ||೧||

———: o : ——

ಮಂಗಳಮಸ್ತು

ಫೀನಿಕ್ಸ್ ಮುದ್ರಣಾಲಯ, ವಿಶ್ವೇಶ್ವರಪುರ, ಬೆಂಗಳೂರು ಸಿಟಿ